# ಆಲ್ಬರ್ಟ್ ಐನ್‌ಸ್ಟೈನರ ಮಾನವೀಯ ಮುಖ



ಮೂಲ: ಹೆಲನ್ ಡ್ಯೂಕಾಸ್ ಮತ್ತು ಬನೇಶ್ ಹಾಫ್‌ಮನ್
ಅನುವಾದ: ಜಿ. ಟಿ. ನಾರಾಯಣರಾವ್

ಆಲ್ಬರ್ಟ್ ಐನ್‌ಸ್ಟೈನರ

# ಮಾನವೀಯ ಮುಖ

ಅವರ ಪತ್ರಾಗಾರದಿಂದ ಪುಟಿದ ಹೊಸ ಹೊಳಹುಗಳು

ಆಯ್ಕೆ ಮತ್ತು ಸಂಪಾದನೆ

ಹೆಲನ್ ಡ್ಯೂಕಾಸ್ ಮತ್ತು ಬನೇಶ್ ಹಾಫ್‌ಮನ್

ಇಂಗ್ಲಿಷಿನಿಂದ ಕನ್ನಡಕ್ಕೆ

ಜಿ. ಟಿ. ನಾರಾಯಣರಾವ್

ಡಿ. ವಿ. ಕೆ. ಮೂರ್ತಿ

ಕೃಷ್ಣಮೂರ್ತಿಪುರಂ : : ಮೈಸೂರು ೪

*ALBERT EINSTEINARA MANAVEEYA MUKHA*—Kannada translation of ALBERT EINSTEIN—THE HUMAN SIDE : NEW GLIMPSES FROM HIS ARCHIVES selected and edited by Helen Dukas and Banesh Hoffman and published in 1979 by Princeton University Press, Princeton, New Jersey 08540. Kannada translation by kind permission of the Publishers. Second Edition : 1992. Translated by G. T. Narayana Rao. Published by D,V.K. Murthy; Mysore 570 004.

ಮೊದಲನೆಯ ಮುದ್ರಣ : ೧೯೮೧
ಎರಡನೆಯ ಮುದ್ರಣ : ೧೯೯೨


೮, ಅತ್ರಿ ಕಾಮಾಕ್ಷಿ ಆಸ್ಪತ್ರೆ ರಸ್ತೆ, ಕುವೆಂಪುನಗರ, ಮೈಸೂರು—೫೭೦ ೦೨೩

ಮುದ್ರಕರು : ಎ. ಜಿ. ಸುವ್ರತೀಂದ್ರ
ವಾಣೀ ಪ್ರೆಸ್ : ಚಾಮರಾಜಪುರಂ : ಮೈಸೂರು ೫೭೦ ೦೦೪

ಐನ್‌ಸ್ಟೈನರ ಪರಮ ಮಿತ್ರ ಮತ್ತು
ಅವರ ಎಸ್ಟೇಟಿನ ನಿಷ್ಠಾವಂತ ನ್ಯಾಸಧಾರಿ

ಆಟೊ ನಾಥನ್

ಅವರಿಗೆ ನಿವೇದಿತವಾಗಿದೆ*

---

* ಇಂಗ್ಲಿಷ್ ಆವೃತ್ತಿ

ಸಾಹಿತ್ಯದ ಮಾರ್ದವತೆಗೆ ವಿಜ್ಞಾನದ ಖಚಿತತೆಯನ್ನು
ಹದವರಿತು ಬೆರೆಸಿ ವಿನೂತನ ಶೈಲಿಯ ಪ್ರವರ್ತಕರಾಗಿರುವ,
ಪರಮ, ಸೌಂದರ್ಯದ ವಿನೀತ ಆರಾಧಕರಾಗಿರುವ, ಮತ್ತು
ಸಕಲ ಜೀವಿಗಳಲ್ಲಿ ಸದ್ಗುಣವನ್ನೇ ಸದಾ ಕಾಣುತ್ತಿರುವ

ಪು. ತಿ. ನರಸಿಂಹಾಚಾರ್

**ಇವರಿಗೆ ಈ ಕನ್ನಡಾನುವಾದ ನಿವೇದಿತವಾಗಿದೆ**

# ಪ್ರಕಾಶಕರ ಮೊದಲ ನುಡಿ*

ಪ್ರಿನ್ಸ್‌ಟನ್ ಯೂನಿವರ್ಸಿಟಿ ಪ್ರೆಸ್ಸಿನ ನಾವು ಮುಂದೊಂದು ದಿವಸ *The Writings of Albert Einstein* ಎಂಬ ಸಂಪೂರ್ಣ ಮತ್ತು ವಿದ್ವತ್ಪೂರ್ಣ ಗ್ರಂಥವನ್ನು ಸುಮಾರು ಇಪ್ಪತ್ತು ಸಂಪುಟಗಳಲ್ಲಿ ಪ್ರಕಾಶಿಸಲು ಯೋಜಿಸಿದ್ದೇವೆ. ಈ ಬೃಹದ್ಯೋಜನೆಯ ನಿರ್ವಹಣೆಗೆ ಹಲವಾರು ವರ್ಷಗಳೇ ಬೇಕಾಗುತ್ತವೆ. ಅವರ ಮೊದಲ ಹೂಟಿ ಈಗಾಗಲೇ ಆರಂಭವಾಗಿದೆ. ಇದರಲ್ಲಿ ನಾವು ಉದ್ಯುಕ್ತರಾಗಿದ್ದಾಗ, ೧೯೨೮ರಿಂದ ೧೯೫೫ರಲ್ಲಿ ಐನ್‌ಸ್ಟೈನ್ ಮಡಿಯುವ ತನಕ ಅವರ ಕಾರ್ಯದರ್ಶಿಯಾಗಿದ್ದು ತರುವಾಯದ ದಿನಗಳಲ್ಲಿ ಐನ್‌ಸ್ಟೈನ್ ಪತ್ರಾಗಾರದ ಪಾಲಿಕೆಯಾಗಿರುವ ಮಿಸ್ ಹೆಲನ್ ಡ್ಯೂಕಾಸ್ ಅವರು, ಐನ್‌ಸ್ಟೈನರ ವೈಶಿಷ್ಟ್ಯ ಮತ್ತು ವ್ಯಕ್ತಿತ್ವ ಎದ್ದು ಕಾಣುವ ಹಲವಾರು ಕಾಗದ ಮತ್ತು ಬರವಣಿಗೆ ತುಣುಕುಗಳನ್ನು ಸ್ವಂತಾಸಕ್ತಿಯಿಂದ ಸಂಗ್ರಹಿಸಿದ್ದರೆಂಬ ಸಂಗತಿ ತಿಳಿಯಿತು. ಇವರು ಆ ತನಕ ಸಂಗ್ರಹಿಸಿದ್ದ ವಸ್ತುವಿನಿಂದ ಆಕರ್ಷಿತರಾದ ನಾವು ಅದನ್ನೂ ಅದರೊಂದಿಗೆ ಹೊಂದುವ ಇನ್ನಷ್ಟು ವಸ್ತುವನ್ನೂ ಪುಟ್ಟ ಪುಸ್ತಕದ ರೂಪದಲ್ಲಿ ಪ್ರಕಟಿಸಲು ಅನುಮತಿ ಕೊಡಬೇಕೆಂದು ಆಲ್ಬರ್ಟ್ ಐನ್‌ಸ್ಟೈನ್ ಅವರ ಎಸ್ಟೇಟಿನ ನ್ಯಾಸಧಾರಿಗಳಾಗಿರುವ ಮಿಸ್ ಡ್ಯೂಕಾಸ್ ಮತ್ತು ಡಾ. ಆಟೊ ನಾಥನ್ ಅವರನ್ನು ಪ್ರಾರ್ಥಿಸಿದೆವು. ಇವರಿಬ್ಬರೂ ತುಂಬ ವಿಶ್ವಾಸದಿಂದ ನಮ್ಮ ಕೋರಿಕೆಯನ್ನು ಅನುಮೋದಿಸುತ್ತ ಈ ಯೋಜನೆಯನ್ನು ಕಾರ್ಯರೂಪಕ್ಕೆ ಇಳಿಸುವಲ್ಲಿ ಮಿಸ್ ಡ್ಯೂಕಾಸರ ಜೊತೆ ಯೂನಿವರ್ಸಿಟಿ ಆಫ್ ನ್ಯೂಯಾರ್ಕಿನ ಕ್ವೀನ್ಸ್ ಕಾಲೇಜಿನಲ್ಲಿ ಪ್ರೊಫೆಸರ್ ಆಗಿರುವ ಬನೆಶ್ ಹಾಫ್‌ಮನ್ ಸಹಯೋಗಿಸಲು ಒಪ್ಪಿದರೆ ಮಾತ್ರ ಇದು ಸಾಧ್ಯವಾದೀತೆಂದು ಸಲಹೆ ನೀಡಿದರು. ಡಾ. ಹಾಫ್‌ಮನ್ ಐನ್‌ಸ್ಟೈನರ ಸಹಯೋಗಿ ಆಗಿದ್ದರು; ಅಲ್ಲದೆ ಅವರು ಈ ಮೊದಲೇ ಮಿಸ್ ಡ್ಯೂಕಾಸ್ ಜೊತೆಗೂಡಿ, ಐನ್‌ಸ್ಟೈನರ ಜೀವನಚರಿತ್ರೆಯಾಗಿ ಪ್ರಮಾಣಗ್ರಂಥವೆಂದು ಹೆಸರು ಪಡೆದ ಮತ್ತು ಅಮೆರಿಕನ್ ಇನ್‌ಸ್ಟಿಟ್ಯೂಟ್ ಆಫ್ ಫಿಸಿಕ್ಸ್ ಹಾಗೂ ಯುನೈಟೆಡ್

---

* ಇಂಗ್ಲಿಷ್ ಆವೃತ್ತಿಗೆ

ಸ್ಟೇಟ್ಸ್ ಸ್ಟೀಲ್ ಫೌಂಡೇಶನ್ ಈ ಸಂಸ್ಥೆಗಳು ಪ್ರದಾನಿಸಿದ ೧೯೭೩ರ ವಿಜ್ಞಾನಲೇಖನ ಬಹುಮಾನ ಗಳಿಸಿದ, *Albert Einstein : Creator and Rebel* ಎಂಬ ಗ್ರಂಥ ಬರೆದಿದ್ದರು. ತಮ್ಮ ಮೊದಲಿನ ಸಹಯೋಗವನ್ನು ನವೀಕರಿಸುವುದು ಡಾ. ಹಾಫ್‌ಮನ್ನರಿಗೂ ಮಿಸ್ ಡ್ಯೂಕಾಸರಿಗೂ ತುಂಬ ಇಷ್ಟದ ವಿಷಯವಾಯಿತು. ಇದರ ಫಲವೇ ಪ್ರಸಕ್ತ ಪುಸ್ತಕ.

ಪ್ರಿನ್‌ಸ್ಟನ್ ಯೂನಿವರ್ಸಿಟಿ ಪ್ರೆಸ್ಸಿನ ನಾವು ಈ ಪುಸ್ತಕವನ್ನು ಪ್ರಕಟಿಸುವುದರಲ್ಲಿ ವಿಶೇಷ ಸಂಭ್ರಮ ತಳೆದಿದ್ದೇವೆ. ಏಕೆಂದರೆ ಅಮೆರಿಕದಲ್ಲಿ ನಾವೇ ಐನ್‌ಸ್ಟೈನರ ಪ್ರಥಮ ಪ್ರಕಾಶಕರು. ೧೯೨೩ರಲ್ಲಿ *The Meaning of Relativity*ಯನ್ನು ಹೊರತಂದೆವು ; ಅವರ ಕೊನೆಯ ಪ್ರಕಾಶಕರೂ ನಾವೇ—ಏಕೆಂದರೆ ಐನ್‌ಸ್ಟೈನ್ [ಆ ಮೊದಲು ತಾವು ರೂಪಿಸಿದ್ದ] ಗುರುತ್ವದ ಸಾರ್ವತ್ರೀಕೃತ ಸಿದ್ಧಾಂತದ ಬಗ್ಗೆ ಬರೆದ ಅಂತಿಮ ಸೂತ್ರೀಕರಣವನ್ನು *The Meaning of Relativity*ಯ ಐದನೆಯ ಆವೃತ್ತಿಯಲ್ಲಿ ಸೇರಿಸಲಾಗಿದೆ. ವಿಜ್ಞಾನಿಯಾಗಿ ಮಾತ್ರವಲ್ಲ ಮಾನವಜೀವಿಯಾಗಿ ಕೂಡ ಮಹಾನುಭಾವನಾಗಿದ್ದ ಒಬ್ಬ ವ್ಯಕ್ತಿಯ ಅಸದೃಶ ಹೊಳಹುಗಳನ್ನು ಪ್ರಕಟಿಸುವುದರ ಮೂಲಕ ಪ್ರಸಕ್ತ ಪುಸ್ತಕ ಈ ಹಿಂದಿನದಕ್ಕೆ ಪೂರಕವಾಗಿದೆ.

# ಕನ್ನಡ ಅನುವಾದಕನ ಅರಿಕೆ

'ಆಲ್ಬರ್ಟ್ ಐನ್‌ಸ್ಟೈನ್'* ಜೀವನ ಚರಿತ್ರೆ ಬರೆಯುತ್ತಿದ್ದಾಗ, ೧೯೭೮–೭೯, ಹೊಸ ಸಂಗತಿ ಮತ್ತು ಮಾಹಿತಿಸಂಗ್ರಹಣೆಗೋಸ್ಕರ ವ್ಯವಸ್ಥಿತ ಪ್ರಯತ್ನ ಮಗ್ನನಾಗಿದ್ದೆ. ೧೯೭೯ ಫೆಬ್ರುವರಿ ೧೯ರ *Time*(ಅಮೆರಿಕದೇಶದ) ವಾರಪತ್ರಿಕೆಯಲ್ಲಿ ಪ್ರಕಟವಾಗಿದ್ದ ಜಾಹೀರಾತು ಸಹಜವಾಗಿ ನನ್ನ ಗಮನ ಸೆಳೆಯಿತು :

### *ON THE HUMAN SIDE*

A prolific and engaging writer Einstein in his long career corresponded with notables and ordinary people alike. At times he touched on matters of great moment, at other times on everyday things, like advising a young person on a career choice. In a small centennial volume, ALBERT EINSTEIN, THE HUMAN SIDE (Princeton University Press, $ 8.95), his onetime callaborators Banesh Hoffmann and his former Secretary Helen Dukas have mined some nuggets from his letters from the master's archives at Princeton.

### "ಮಾನವೀಯ ಮುಖ" ಕುರಿತು

ಸಮೃದ್ಧ ಮತ್ತು ಆಕರ್ಷಕ ಲೇಖಕರಾಗಿದ್ದ ಐನ್‌ಸ್ಟೈನ್ ತಮ್ಮ ಸುದೀರ್ಘ ಜೀವಿತಾವಧಿಯಲ್ಲಿ ಗಣ್ಯರ ಮತ್ತು ಸಾಮಾನ್ಯರ ಜೊತೆ ಸಮಾನವಾಗಿಯೇ ಪತ್ರ ವ್ಯವಹಾರ ನಡಸಿದರು. ಕೆಲವೇಳೆ ಅವರು ಮಹದ್ಘಟನೆಗಳನ್ನು ಕುರಿತು ಪ್ರಸ್ತಾವಿಸಿದರೆ ಇತರ ವೇಳೆ ದೈನಂದಿನ ವಿಷಯಗಳನ್ನು ಕುರಿತು—ಉದಾಹರಣೆಗೆ, ಜೀವನ ವೃತ್ತಿಯನ್ನು ಆಯುವುದರ ಬಗ್ಗೆ ತರುಣನೊಬ್ಬನಿಗೆ ಸಲಹೆ ನೀಡಿಕೆ—ಪ್ರಸ್ತಾವಿಸಿದ್ದಿತ್ತು. ಸ್ವಲ್ಪಕಾಲ ಅವರ ಸಹಯೋಗಿಯಾಗಿದ್ದ ಬನೇಶ್ ಹಾಫ್‌ಮನ್, ಮತ್ತು

---

* ಮೈಸೂರಿನ ಶ್ರೀ ಡಿ.ವಿ.ಕೆ. ಮೂರ್ತಿಯವರ ಪ್ರಕಟಣೆ (೧೯೮೦)

ಐನ್‌ಸ್ಟೈನರ ಮಾಜಿ ಕಾರ್ಯದರ್ಶಿ ಹೆಲನ್ ಡ್ಯೂಕಾಸ್ "ಆಲ್ಬರ್ಟ್ ಐನ್‌ಸ್ಟೈನ್ ಮಾನವೀಯ ಮುಖ" (ಪ್ರಿನ್‌ಸ್ಟನ್ ಯೂನಿವರ್ಸಿಟಿ ಪ್ರೆಸ್, $ ೮.೯೫) ಎನ್ನುವ ಪುಟ್ಟ ಶತಾಬ್ದಿ ಸಂಪುಟದಲ್ಲಿ ಈ ಆಚಾರ್ಯಪುರುಷನ ಪತ್ರಾಗಾರದಲ್ಲಿರುವ (ಪ್ರಿನ್‌ಸ್ಟನ್)ಪತ್ರಗಳಿಂದ ಕೆಲವು ಹೊನ್ನಹೆಗ್ಗೆಗಳನ್ನು ಅಗೆದು ತೆಗೆದಿಟ್ಟಿದ್ದಾರೆ.

ಗೀತಾ ಬುಕ್ ಹೌಸಿನ ಸುಟಿ ಗೆಳೆಯರು ಈ ಪುಸ್ತಕವನ್ನು ನನಗೆ ಅತಿ ಕ್ಷಿಪ್ರವಾಗಿ ಅಮೆರಿಕದಿಂದ ತರಿಸಿಕೊಟ್ಟರು (ಜುಲೈ ೧೯೭೯).

ಹಸ್ತಕ್ಕೆ ಬಂದ ಪುಸ್ತಕವನ್ನು ಮೆಲುಕುತ್ತ ಮೆಲುಕುತ್ತ ಮಸ್ತಕಕ್ಕೇರಿಸಿ (ಕುವೆಂಪು ಕ್ಷಮೆಕೋರಿ) ಐನ್‌ಸ್ಟೈನ್ ಎಂಬ ಪರಾತ್ಪರ ವಸ್ತುವಿನಲ್ಲಿ ಪ್ರಕಟವಾಗಿದ್ದ ಬುದ್ಧ ಮತ್ತು ಸಾಕ್ರೆಟೀಸ್ ದರ್ಶನಕ್ಕೆ ಮಣಿದೆ.* ಇದನ್ನು ಕನ್ನಡಿಸಲೇಬೇಕೆಂಬ ಆದಮ್ಯ ಹಂಬಲಪೀಡಿತನಾದ ನಾನು ಒಡನೆ ಡಾ. ಆಟೊ ನಾಥನ್ ಅವರಿಗೆ ನನ್ನ ಅಭಿಲಾಷೆಯನ್ನು ವಿವರಿಸಿ ಪತ್ರ ಬರೆದೆ (೫-೮-೧೯೭೯). ಇವರು ಐನ್‌ಸ್ಟೈನರ ಬಾಳಗೆಳೆಯ ಮತ್ತು ಎಸ್ಟೇಟ್ ಆಫ್ ಆಲ್ಬರ್ಟ್ ಐನ್‌ಸ್ಟೈನ್ ಇದರ ನ್ಯಾಸಧಾರಿ. ತತ್ಪೂರ್ವ 'ಆಲ್ಬರ್ಟ್ ಐನ್‌ಸ್ಟೈನ್' ರಚನೆಯ ದಿನಗಳಂದು ಪತ್ರವ್ಯವಹಾರದ ಮೂಲಕ ನನಗೆ ಈ ಮಹನೀಯರ ಜೊತೆ ಆತ್ಮೀಯ ಪರಿಚಯ ಮತ್ತು ಇವರಿಂದ ಉಪಯುಕ್ತ ಮಾರ್ಗದರ್ಶನ ಲಭಿಸಿದ್ದುವು.

ಕನ್ನಡದಲ್ಲಿ ಪುಸ್ತಕ ಪ್ರಕಟಣೆ, ಅದೂ ಈ ತೆರನಾದವುಗಳ ಪ್ರಕಟಣೆ, ಖಂಡಿತ ಲಾಭದಾಯಕ ಉದ್ಯಮವಲ್ಲ. ಆದರೂ ಪ್ರಸಕ್ತ ವಸ್ತುವನ್ನು ಕುರಿತಂತೆ ಪ್ರಕಾಶಕ ಮಿತ್ರ ಶ್ರೀ ಡಿ.ವಿ.ಕೆ. ಮೂರ್ತಿಯವರಿಗೂ ನನಗೂ ಸಮಾನವಾಗಿಯೇ ಇರುವ ಗಾಢ ಪ್ರೇಮ ಮತ್ತು ಗೌರವಗಳ ಕಾರಣವಾಗಿ ಈ ಅನುವಾದದ ಸಾಹಸಕ್ಕೆ ಕೈಹಾಕುವುದಾಗಿದೆ; ಎಂದೇ "ಪ್ರಕಾಶಕರು (ಎಸ್ಟೇಟ್ ಆಫ್ ಆಲ್ಬರ್ಟ್ ಐನ್‌ಸ್ಟೈನ್) ಧರ್ಮಾರ್ಥವಾಗಿ ಕನ್ನಡ ಅನುವಾದದ ಪ್ರಕಟಣೆಗೆ ಅನುಮತಿಯೀಯಬೇಕು" ಎಂದು ಡಾ. ಆಟೊ ನಾಥನ್ ಅವರನ್ನು ಕೋರಿದ್ದೆ.

ಡಾ. ಆಟೊ ನಾಥನ್ ಆಗಸ್ಟ್ ೩೧ರಂದು ಉತ್ತೇಜನಕಾರಿ ಪ್ರತ್ಯುತ್ತರ ಬರೆದರು: ಗ್ರಂಥದ ಸರ್ವಸ್ವಾಮ್ಯ ಪ್ರಿನ್‌ಸ್ಟನ್ ಯೂನಿವರ್ಸಿಟಿ ಪ್ರೆಸ್ ಹೊಂದಿರುವುದರಿಂದ ಅಲ್ಲಿಗೆ ನನ್ನ ಕಾಗದವನ್ನು ರವಾನಿಸಲಾಗಿದೆ, ಅಲ್ಲಿಂದ ಶೀಘ್ರವಾಗಿ ನನಗೆ ಉತ್ತರ ಬರಬಹುದೆಂಬುದು ಅದರ ಸಾರಾಂಶ.

ಸೆಪ್ಟೆಂಬರ್ ೫ರಂದು ಪ್ರಿನ್‌ಸ್ಟನ್ ಯೂನಿವರ್ಸಿಟಿ ಪ್ರೆಸ್ ನನಗೆ ಬರೆದ

* 'ಆಲ್ಬರ್ಟ್ ಐನ್‌ಸ್ಟೈನ್' ಪುಟ xxix

ಕಾಗದ ನನ್ನ ಹಂಬಲಕ್ಕೂ ಡಾ. ಆಟೊ ನಾಥನ್ ಅವರ ಆಶಯಕ್ಕೂ ಮೂರ್ತರೂಪ ನೀಡಿತ್ತು "ಈ ಯೋಜನೆಯ (*Albert Einstein ; The Human Side* ಇದರ ಕನ್ನಡ ಅನುವಾದ ಮತ್ತು ಪ್ರಕಟಣೆ) ವಿಚಾರ ತಿಳಿದು ನಮಗೆ ಅತ್ಯಾನಂದವಾಗಿದೆ. ಎಸ್ಟೇಟ್ (ಡಾ. ಆಟೊ ನಾಥನ್) ನೀಡಿರುವ ಒಪ್ಪಿಗೆಗೆ ನಮ್ಮ ಅನುಮತಿಯನ್ನು, ಯಾವ ಆರ್ಥಿಕ ಷರತ್ತೂ ಇಲ್ಲದೆ, ಸೇರಿಸಲು ಹರ್ಷಿಸುತ್ತೇವೆ. ಕನ್ನಡ ಆವೃತ್ತಿಯ ಒಂದು ಗೌರವ ಪ್ರತಿಯನ್ನು ಯುಕ್ತವೇಳೆಯಲ್ಲಿ ನಮ್ಮ ಗ್ರಂಥಾಲಯಕ್ಕೆ ಕಳಿಸಿಕೊಡುವಿರಾಗಿ ನಿರೀಕ್ಷಿಸುತ್ತೇವೆ. ಅಲ್ಲದೆ ಮೂರು ಪ್ರತಿಗಳನ್ನು, ಇಬ್ಬರು ಸಂಪಾದಕರಿಗೆ ಗೌರವಾರ್ಥ ಕೊಡಬೇಕಾದ ಪ್ರತಿಗಳನ್ನೂ ಒಳಗೊಂಡಂತೆ, ನೇರವಾಗಿ ಡಾ. ಆಟೊ ನಾಥನ್ ಅವರಿಗೆ ರವಾನಿಸುವಿರೆಂದು ಭಾವಿಸಿದ್ದೇವೆ."

ವ್ಯಕ್ತಿ 'ಎದೆ ತುಂಬಿ ಹಾಡು'ವುದು ಇಂಥ ಕೃತಾರ್ಥ ಕ್ಷಣಗಳಲ್ಲೇ.

ಮೇಲುನೋಟಕ್ಕೆ ಅನುಚಿತವೆನ್ನಿಸಬಹುದಾದ ಇನ್ನೊಂದು ಅನುಭವವನ್ನು ಇಲ್ಲಿ ವರದಿ ಮಾಡಬೇಕು. 'ಆಲ್ಬರ್ಟ್ ಐನ್‌ಸ್ಟೈನ್' ಮುದ್ರಣವಾಗುತ್ತಿದ್ದಾಗ—೧೯೭೯ರ ಉತ್ತರಾರ್ಧ—ದೇಶವಿದೇಶಗಳ ವಿವಿಧವ್ಯಕ್ತಿ ಸಂಸ್ಥೆಗಳಿಗೆ ಐನ್‌ಸ್ಟೈನ್ ಮತ್ತು ಅವರ ಜೀವನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಬೇಡಿ ಕಾಗದ ಬರೆದೆ. ಮದ್ರಾಸಿನ ಅಮೆರಿಕನ್ ಸೆಂಟರ್ ಲೈಬ್ರೆರಿ, ಬೆಂಗಳೂರಿನ ಮ್ಯಾಕ್ಸ್‌ಮುಲ್ಲರ್ ಭವನ, ಮುಂಬಯಿಯ ತಾತಾ ಮೂಲಭೂತ ಸಂಶೋಧನಾಲಯ, ಇಸ್ರೇಲ್, ಪೋಲೆಂಡ್, ಐರ್ಲೆಂಡ್ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳು ಇಷ್ಟು ಕಡೆಗಳಿಂದ (ಕೊಳ್ಳುವುದಾಗಿದ್ದರೆ ರೂ ೪೦೦೦ಕ್ಕೆ ಕಡಿಮೆ ಬೆಲೆಯುವಲ್ಲದ) ಛಾಯಾ ಚಿತ್ರಗಳು ಮತ್ತು ಇತರ ಮಾಹಿತಿಗಳು ಮುಫತ್ತಾಗಿ ಬಂದುವು. ಆದರೆ ಭಾರತ ಸರ್ಕಾರದ ವಾರ್ತಾ ಮತ್ತು ಪ್ರಸಾರ ಮಂತ್ರಾಲಯದ ಛಾಯಾಗ್ರಾಹಕ ವಿಭಾಗ ನನ್ನ ೭-೧೦-೧೯೭೯ರ ಕೋರಿಕೆಗೆ ೩-೪-೧೯೮೦ರಂದು ಮಾಮೂಲಿ ಕಲ್ಲಚ್ಚುಮುದ್ರಿತ ಹಾಳೆಯೊಂದನ್ನು ಮಾರೋಲೆಯಾಗಿ ಕಳಿಸುವ ಕೃಪೆ ಮಾಡಿತು.* ಅದರ ಪ್ರಕಾರ ನಾನಾಗಲಿ ನನ್ನ ಪ್ರತಿನಿಧಿಯಾಗಲಿ ಆ ವಿಭಾಗದ ನವದೆಹಲಿ ಕಛೇರಿಗೆ ಹೋಗಿ ಛಾಯಾಚಿತ್ರ ಮಾದರಿಗಳನ್ನು ಆಯ್ದು ಅವುಗಳ ಬೆಲೆಯನ್ನು ಮುಂಗಡ ತೆತ್ತರೆ ಆ ಚಿತ್ರಗಳನ್ನು ಯಥಾವಕಾಶ ಒದಗಿಸಲಾಗುವುದೆಂಬ ಆಶ್ವಾಸನೆ ಇತ್ತು. ಇಷ್ಟೇ ಅಲ್ಲ. ಅವನ್ನು ಪುಸ್ತಕದಲ್ಲಿ

* "ಆಲ್ಬರ್ಟ್ ಐನ್‌ಸ್ಟೈನ್" ಪುಸ್ತಕ ೨೯-೨-೧೯೮೦ರಂದು ಬಿಡುಗಡೆ ಆಗಿತ್ತು !

ಮುದ್ರಿಸಬೇಕಾದರೆ ಅಲ್ಲಿಂದ ಶುಲ್ಕ ತೆರಬೇಕು. ನಿಜ, ಘನಸರ್ಕಾರದ ಪೆಠಾರಿಯೊಳಗಿನ ಮಾಹಿತಿಗಳು ದುರ್ಗಮಾಭೇದ್ಯ—ಪಾಮರರಿಗೆ. "ಮಾನ್ಯ ಪುರಸಭಾಪತಿಯವರೇ ! ಮಾನವಜನ್ಮ ಅಲ್ಪಕಾಲಿಕವಾದದ್ದು, ಅಧಿಕಾರಿಗಳಾದರೋ ಅತಿ ಮಂದಗತಿಯಿಂದ ಕೆಲಸವೆಸಗುವವರು. ಇವರ ನಿಧಾನ ನೀತಿಗೆ ಹೊಂದಿಕೊಳ್ಳಬಲ್ಲಂಥ ಸುದೀರ್ಘ ಜೀವನ ನನ್ನದಲ್ಲ. ನಿಮ್ಮ ಸ್ನೇಹಯುತ ಉದ್ದೇಶವನ್ನು ನಾನು ಮನಸಾರೆ ಕೃತಜ್ಞತೆಯಿಂದ ಸ್ಮರಿಸುತ್ತೇನೆ." ('ಆಲ್ಬರ್ಟ್ ಐನ್‌ಸ್ಟೈನ್' ಪುಟ ೨೪೭) ಐನ್‌ಸ್ಟೈನರ ಈ ಮಾತುಗಳಿಂದ ಸ್ಫೂರ್ತಿ ಪಡೆದು ಆ ವಿಭಾಗಾಧಿಕಾರಿಗೆ ಮುಂದಿನ ಕಗ್ಗ ಗೀಚಿ ಕಳಿಸಿದೆ :

Too short is the life of we mortals
To come and cross your grand portals
To select the photographs that mayn't exist
And return with blasted hopes—I can't persis !

ಮಾನವೀಯ ಮುಖ ಎಂದರೇನು ? ಇದರ ಲಕ್ಷಣಗಳನ್ನು ಐನ್‌ಸ್ಟೈನರ ವಿಜ್ಞಾನಜೀವನದಷ್ಟೇ ಸಮೃದ್ಧವಾದ ವಿಜ್ಞಾನೇತರ ಜೀವನದಿಂದ ಆಯ್ದ ಈ ಮುಂದಿನ ಮೂರು ಘಟನೆಗಳಲ್ಲಿ ಕಾಣಬಹುದು.

● ಐನ್‌ಸ್ಟೈನರಿಗೆ ೧೯೨೧ರ ಭೌತವಿಜ್ಞಾನ ವಿಭಾಗದ ನೊಬೆಲ್ ಪಾರಿತೋಷಿಕವನ್ನು ಪ್ರದಾನಿಸಿ ಗೌರವಿಸಲಾಯಿತು. ಆ ವೇಳೆಗಾಗಲೇ ಇವರ ಮೊದಲ ಮದುವೆ ವಿವಾಹವಿಚ್ಛೇದನದಲ್ಲಿ ಕೊನೆಗೊಂಡಿತ್ತು. ತಾಯಿ ಜೊತೆ ವಾಸಿಸುತ್ತಿದ್ದ ಇವರ ಎರಡನೆಯ ಮಗ ಪುಟ್ಟ ಎಡ್ವರ್ಡನಿಗೆ ತನ್ನ ವಿಖ್ಯಾತ ತಂದೆಯ ದರ್ಶನವೊಮ್ಮೆ ಲಭಿಸಿತು. ಹನ್ನೊಂದರ ಹೃದ ತಂದೆಗೆ ಸವಾಲೆಸೆದ "ಅಪ್ಪಾ ! ನೀನು ಇಷ್ಟೊಂದು ಪ್ರಸಿದ್ಧನಾಗಿರುವುದರ ಕಾರಣವೇನು ?"

ಸಾಪೇಕ್ಷತಾ ಸಿದ್ಧಾಂತದ ಆವಿಷ್ಕರ್ತೃ ಎರಡನೆಯ ಯೋಚನೆ ಇಲ್ಲದೆ ಆ ಗಳಿಗೆ, ವಾಯುಮಂಡಲಾತೀತ ಅಮೂರ್ತ ಔನ್ನತ್ಯದಿಂದ ಗಟ್ಟಿ ನೆಲಕ್ಕೆ ಥಟ್ಟನಿಳಿದು, ಜವಾಬು ನೀಡಿದರು "ಮಗುವೇ ಕೇಳು ! ಕುರುಡು ಹುಳುವೊಂದು ಕಾಲ್ಚೆಂಡಿನ ಮೇಲೆ ಇದು ಗುಂಡಗಿದೆಯೆಂಬುದನ್ನು ಗಮನಿಸದೆ ತೆವಳುತ್ತಿತ್ತು. ಅದನ್ನು ಗಮನಿಸುವ ಅದೃಷ್ಟ ನನ್ನದಾಗಿತ್ತು." ●

● ಪ್ರಿನ್‌ಸ್ಟನ್ನಿನಲ್ಲಿ ಐನ್‌ಸ್ಟೈನ್ 'ಜಗದ್ಭವ್ಯ ಏಕೈಕ' ಮಹಾವಿಜ್ಞಾನಿಯಾಗಿ ನೆಲಸಿದ್ದಾಗ, ಅವರ ಪಕ್ಕದ ಮನೆಯ ಹತ್ತು ವರ್ಷ ವಯಸ್ಸಿನ ಚಿಕ್ಕ ಹುಡುಗಿ ಒಮ್ಮೆ ಅವರಲ್ಲಿಗೆ ಬಂದಳು "ಅಜ್ಜಾ ! ಈ ಲೆಕ್ಕ ಹೇಳಿಕೊಡಿ."

ಪ್ರಾಥಮಿಕ ತರಗತಿಯ ಅಗಾಧ ಗಣಿತ ಸಮಸ್ಯೆ ಹಿಮಾಲಯ ಭಾರವಾಗಿ ಆ ಪುಟ್ಟ ತಲೆಯ ಮೇಲೆ ಕೂತಿತ್ತು. ಅಜ್ಜ ಪ್ರೀತಿಯಿಂದ ಲಾಲಿಸಿ ಹೇಳಿಕೊಟ್ಟರು. ಮಗು ತೃಪ್ತಿಯಿಂದ ಆಲಿಸಿ ಕಲಿಯಿತು. ಹಿಮಾಲಯ ಭಾರ ಅರಳಿ ಹೂವಾಗಿ ಹಗುರಾಯಿತು.

ತಾಯಿ ಗಮನಿಸಿದಳು, ತನ್ನ ಮಗಳು ಪದೇ ಪದೇ ಐನ್‌ಸ್ಟೈನ್ ನಿವಾಸಕ್ಕೆ ಹೋಗಿಬರುತ್ತಿದ್ದುದನ್ನು. ಮಗುವಿನ ವಿವರಣೆ ಸ್ಪಷ್ಟವಾಗಿತ್ತು "ಲೆಕ್ಕದ ಮನೆಗೆಲಸದಲ್ಲಿ ಸ್ವಲ್ಪ ತೊಂದರೆ ಇತ್ತು. ಜನ ಹೇಳುತ್ತಾರೆ: ೧೧೨ ಸಂಖ್ಯೆಯ ಬಂಗ್ಲೆಯಲ್ಲಿ ಭಾರೀ ಗಣಿತ ವಿದ್ವಾಂಸರಿದ್ದಾರೆ, ಅವರು ತುಂಬ ಒಳ್ಳೆಯ ವ್ಯಕ್ತಿ ಎಂದು. ಹೀಗಾಗಿ ನಾನು ಸೀದಾ ಅವರಲ್ಲಿಗೆ ಹೋದೆ. ಅವರು ನಗುಮೊಗದಿಂದ ನನ್ನನ್ನು ಬರಮಾಡಿಕೊಂಡು, ತಲೆ ನೇವರಿಸಿ, ನನಗೇನು ಬೇಕೆಂದು ಕೇಳಿದರು. ಲೆಕ್ಕದ ಪ್ರಶ್ನೆಗಳೆಲ್ಲವನ್ನೂ ಓದಿ ತುಂಬ ಚೆನ್ನಾಗಿ ವಿವರಿಸಿ ಹೇಳಿಕೊಟ್ಟರು. ಅವು ನನಗೆ ಪೂರ್ತಿ ಅರ್ಥವಾದುವು. ಶಾಲೆಯಲ್ಲಿ ಅಷ್ಟು ಹಿತವಾಗಿ ಹೇಳಿಕೊಡುವುದೇ ಇಲ್ಲ. ಯಾವಾಗ ಬೇಕಾದರೂ ಬಂದು ಹೋಗುತ್ತಿರು ಮಗೂ ಎಂದು ಹೇಳಿದ್ದಾರೆ. ಎಷ್ಟು ಒಳ್ಳೆಯವರು, ಎಷ್ಟು ಬುದ್ಧಿವಂತರು ಆ ತಾತ, ನಿನಗೆ ಗೊತ್ತೇನಮ್ಮಾ !"

ಮಗಳ ಧಾರ್ಷ್ಟ್ಯಕ್ಕೆ ತಾಯಿ ಗಾಬರಿಗೊಂಡಳು. ಎಲ್ಲಾದರೂ ಉಂಟೇ ಈ ಪೋರಿ ಹೋಗಿ ಆ ಹಿರಿಯರಿಗೆ ಹೀಗೆ ದಾಂದಲೆ ಕೊಡುವುದು! ಕೂಡಲೇ ಐನ್‌ಸ್ಟೈನರ ಬಂಗ್ಲೆಗೆ ಧಾವಿಸಿದಳು, ಮಗುವಿನ ತಪ್ಪನ್ನು ಮನ್ನಿಸಬೇಕೆಂದು ಬಿನ್ನವಿಸಿದಳು.

ಐನ್‌ಸ್ಟೈನ್ ತೀರ ಸಹಜವಾಗಿ ಹೇಳಿದರು "ತಾಯೀ ! ನೀವು ಕ್ಷಮಾಯಾಚನೆ ಮಾಡಬಾರದು, ಮಾಡಬೇಕಾಗಿಲ್ಲ. ಮಗು ನನ್ನಿಂದ ಕಲಿತದ್ದು ಅತ್ಯಲ್ಪ. ಆದರೆ ಅದರ ಜೊತೆಗಿನ ಒಡನಾಟದಿಂದ ಮತ್ತು ಮಾತುಕತೆಯಿಂದ ನಾನು ಕಲಿತದ್ದು ಜಾಸ್ತಿ." ●

ಜೆರೊಮ್ ವೈಡ್‌ಮನ್ ಎನ್ನುವ ಹದಿಹರೆಯದ ಹುಡುಗನಿಗೆ ಈ

ಮಾನವಮೇರುವಿನ ಜೊತೆ ಒದಗಿದ್ದ ಆಕಸ್ಮಿಕ ಒಡನಾಟವನ್ನು ಅವ ಪ್ರಥಮಪುರುಷದಲ್ಲಿ ಬಣ್ಣಿಸಿದ್ದಾನೆ:

ಆಗ ನಾನಿನ್ನೂ ಹವಿ ಹರೆಯುವ ಹುಡುಗ. ನನ್ನ ಹಾದಿ ಅರಸಿ ನಡೆಯುತ್ತಿದ್ದ ಪಥಿಕ. ಗೌರವಾನ್ವಿತ ದಾನಿಯೊಬ್ಬರ ಗೃಹದಲ್ಲಿ ಏರ್ಪಡಿಸಲಾಗಿದ್ದ ಭೋಜನ ಸಮಾರಂಭಕ್ಕೆ ಆಹ್ವಾನಿತನಾಗಿದ್ದೆ. ಭೋಜನಾನಂತರ ಆತಿಥೇಯ ಗೃಹಿಣಿ ನಮ್ಮನ್ನು ವಿಶಾಲ ಕೊಠಡಿಗೆ ಕರೆದೊಯ್ದಳು. ಇತರ ಅತಿಥಿಗಳು ಗುಂಪಾಗಿ ಅಥವಾ ಬಿಡಿಯಾಗಿ ಒಳಬಂದು ಸೇರುತ್ತಿದ್ದರು. ಅಲ್ಲಿ ನನ್ನ ಕಣ್ಣುಗಳು ಕಂಡದ್ದೇನು ? ತತ್‌ಕ್ಷಣವೇ ನನ್ನನ್ನು ನಿಶ್ಚೇಷ್ಟಿತನಾಗಿಸಬಲ್ಲ ಎರಡು ದೃಶ್ಯಗಳನ್ನು : ಕಿಂಕಾಪಿನ ಪತ್ತಲದಿಂದ ಅಲಂಕೃತವಾಗಿದ್ದ ಪುಟ್ಟ ಕುರ್ಚಿಗಳನ್ನು ಉದ್ದ ಮತ್ತು ಚೊಕ್ಕ ಸಾಲುಗಳಲ್ಲಿ ಅಳವಡಿಸಲಾಗಿತ್ತು. ನೇರ ಎದುರಿಗೆ ವೇದಿಕೆಯ ಮೇಲೆ ವಾದ್ಯಗಳನ್ನು ಗೋಡೆಗೆ ಆನಿಸಲಾಗಿತ್ತು. ನಾನು ಏನನ್ನು ಎದುರಿಸಬೇಕಾಗಿದೆ ಎಂಬುದು ಆ ವಾದ್ಯಗಳ ವೈವಿಧ್ಯ ಮತ್ತು ಸಂಖ್ಯೆಯಿಂದ ಸುವೇದ್ಯವಾಯಿತು: ಕೊಠಡಿ ಬೈಠಕ್.

"ಎದುರಿಸಬೇಕಾಗಿದೆ" ಪದವನ್ನು ಬಳಸಿರುವುದೇಕೆಂದರೆ ಸಂಗೀತ ನನಗೆ ಪೂರ್ತಿ ಅರ್ಥರಹಿತವಾಗಿತ್ತು. ನಾನು ಹೆಚ್ಚು ಕಡಿಮೆ ಗಾನಬಧಿರ. ಅತ್ಯಂತ ಸರಳ ರಾಗವನ್ನಾದರೂ ವಿಶೇಷ ಪ್ರಯತ್ನದಿಂದ ಮಾತ್ರ ಅನುಸರಿಸಬಲ್ಲವನಾಗಿದ್ದೆ, ಅಷ್ಟೆ. ಗಂಭೀರಸಂಗೀತವೆಂಬುದು ನನ್ನಮಟ್ಟಿಗೆ ಸದ್ದುಗದ್ದಲಗಳ ಮೇಳನಕ್ಕಿಂತ ಆಚೆಗೆ ಏನೂ ಆಗಿರಲಿಲ್ಲ. ಅಂದಮೇಲೆ ಈ ತೆರನಾಗಿ ಇರುಕಿನಲ್ಲಿ ಸಿಕ್ಕಿಹಾಕಿಕೊಂಡಾಗ ಯಾವಾಗಲೂ ಏನು ಮಾಡುತ್ತಿದ್ದನೋ ಅದನ್ನೇ ಈಗಲೂ ಮಾಡಿದೆ: ಕುಳಿತುಕೊಂಡೆ, ವಾದ್ಯಮೇಳ ಆರಂಭವಾದಾಗ ರಸಾನುಭವಮುದ್ರೆಯನ್ನು ಮುಖದ ಮೇಲೆ ಬುದ್ಧಿಪೂರ್ವಕವಾಗಿ ತಂದುಕೊಂಡೆ, ಕಿವಿಗಳಿಗೆ ಒಳಗಿನಿಂದ ಗಿಟ್ಟಿಗಿಡಿದುಕೊಂಡೆ ಮತ್ತು ಸಂಪೂರ್ಣವಾಗಿ ಅಸಂಬದ್ಧವಾದ ನನ್ನದೇ ಯೋಚನೆಗಳಲ್ಲಿ ಹುದುಗಿಕೊಂಡೆ.

ಕೆಲವು ಕ್ಷಣಗಳು ಸಂದುವು. ಅಲ್ಲಿ ನೆರೆದಿದ್ದ ಶ್ರೋತೃಗಳು ಸಂತೋಷ ಘೋಷ ಹೊಮ್ಮಿಸುತ್ತಿದ್ದುದು ನನ್ನ ಅರಿವಿಗೆ ಬಂದಿತು. ಆಗ ನಾನು ಒಳಗಿವಿಗಳಿಂದ ಗಿಟ್ಟಿಗಳನ್ನು ಕಳಚಿಹಾಕುವುದು ಕ್ಷೇಮವೆಂಬ ನಿರ್ಧಾರಕ್ಕೆ ಬಂದೆ. ಆದೇ ಗಳಿಗೆಯಲ್ಲಿ ನನ್ನ ಬಲಬದಿಯಿಂದ ಬಲು ಮೃದುವಾದ ಆದರೆ ಆಚ್ಚರಿ ತರುವಷ್ಟು ಖಚಿತವಾದ ಪಿಸುನುಡಿ ಮರ್ಮರಿಸಿತು.

"ಬಾಕ್ ನಿಮಗೆ ತುಂಬ ಪ್ರಿಯ ?" ಆ ನುಡಿ ಉಸುರಿತು.

ನನ್ನ ತಿಳಿವಳಿಕೆ ನ್ಯೂಕ್ಲಿಯರ್ ವಿದಳನದ ಬಗೆಗೆ ಎಷ್ಟೋ ಬಾಕ್ ಬಗೆಗೂ ಅಷ್ಟೇ! ಆದರೆ ಬಿಳಿಯ ಬಣ್ಣದ, ಒಪ್ಪವಿಲ್ಲದ ವಿಶಿಷ್ಟ ಕುರುಳು ರಾಶಿಯಿಂದೊಪ್ಪುವ, ಮತ್ತು ದಂತಪಂಕ್ತಿಗಳ ನಡುವೆ ಸದಾ ಹೊಗೆಕೊಳವೆ ಕಚ್ಚಿಕೊಂಡಿರುವ, ಪ್ರಪಂಚದಲ್ಲಿಯೆ ಅತ್ಯಂತ ಪ್ರಸಿದ್ಧ ವದನಗಳ ಪೈಕಿ ಒಂದಂತೂ ನನಗೆ ಖಚಿತವಾಗಿ ತಿಳಿದಿತ್ತು: ನಾನು ಆಲ್ಬರ್ಟ್ ಐನ್‌ಸ್ಟೈನರ ಪಕ್ಕದಲ್ಲೇ ಕುಳಿತಿದ್ದೆ!

ತುಂಬ ಮುಜುಗರದಿಂದ ನಾನೆಂದೆ "ಸರಿ." ಮತ್ತೆ ಮುದುಡಿಕೊಂಡೆ. ಅವರು ಕೇಳಿದ್ದು ತೀರ ಪ್ರಾಸಂಗಿಕವಾದ ಒಂದು ಪ್ರಶ್ನೆ. ನಾನು ಮಾಡ ಬೇಕಾದ್ದಾದರೂ ಏನು? ಅಷ್ಟೇ ಪ್ರಾಸಂಗಿಕವಾಗಿ ಉತ್ತರವೀಯುವುದು ಮಾತ್ರ. ಆದರೆ ನನ್ನ ಪಕ್ಕದಲ್ಲಿದ್ದ ಆ ವ್ಯಕ್ತಿಯ ಅಸಾಧಾರಣ ನಯನ ಗಳು ಹರಿಸಿದ ಕಾಳಜಿ ಅವುಗಳ ಒಡೆಯ ಕೇವಲ ಸಾಮಾನ್ಯ ಪ್ರದರ್ಶನದ ನಿರ್ಲಕ್ಷ್ಯ ಕರ್ತವ್ಯನಿರ್ವಹಣೆಯ ಧೋರಣೆ ತಳೆದಿರಲಿಲ್ಲವೆಂಬುದನ್ನು ಸ್ಪಷ್ಟ ಪಡಿಸಿತು. ನಮ್ಮ ಈ ಮಾತುಕತೆಯಲ್ಲಿ ನನ್ನ ಪಾತ್ರಕ್ಕೆ ನಾನೇನು ಬೆಲೆ ಕೊಟ್ಟಿದ್ದೆ ಎಂಬುದರ ಪರಿವೆಯೇ ಅವರಿಗಿರಲಿಲ್ಲ—ಇದರಲ್ಲಿ ಅವರ ಪಾತ್ರ ಮಾತ್ರ ಅವರಿಗೆ ಮಹತ್ತ್ವದ್ದಾಗಿತ್ತು. ಎಲ್ಲಕ್ಕೂ ಮಿಗಿಲಾಗಿ ಈ ಮಹಾ ಪುರುಷನಿಗೆ ನೀನು ಸುಳ್ಳು—ಅದೆಷ್ಟೇ ಕ್ಷುದ್ರವಾದುದೇ ಆಗಿರಲಿ—ಹೇಳ ಲಾರೆ ಎಂಬುದಾಗಿ ನನ್ನ ಅಂತರ್ವಾಣಿ ಮಿಡಿಯುತ್ತಿತ್ತು.

ತುಂಬ ಅಳುಕಿನಿಂದ ಬಲು ಒಡ್ಡೊಡ್ಡಾಗಿ ಹೇಳಿದೆ "ನನಗೆ ಬಾಕ್ ಬಗ್ಗೆ ಏನೂ ತಿಳಿಯದು. ನಾನೆಂದೂ ಅವನ ಯಾವ ಸಂಗೀತವನ್ನೂ ಕೇಳಿಲ್ಲ."

ಐನ್‌ಸ್ಟೈನರ ಭಾವಗ್ರಾಹಿ ವದನದ ಮೇಲೆ ದಿಗ್ಭ್ರಾಂತ ವಿಸ್ಮಯದ ಛಾಯೆ ಥಳುಕಿ ಮರೆ ಆಯಿತು.

"ನೀವೆಂದೂ ಬಾಕ್‌ನನ್ನು ಕೇಳಿಲ್ಲ?"

ನಾನೆಂದೂ ಬಾತ್ (ಸ್ನಾನ) ತೆಗೆದುಕೊಂಡಿಲ್ಲವೆಂಬುದಾಗಿ ಹೇಳಿದ್ದೆ ನೆಂಬ ಧ್ವನಿ ಸ್ಫುರಿಸುವಂತೆ ಆ ಪ್ರಶ್ನೆ ಇತ್ತು.

ಒಡನೆ ಉತ್ತರವಿತ್ತೆ "ಬಾಕ್‌ನನ್ನು ಮೆಚ್ಚುವ ಬಯಕೆ ನನಗಿಲ್ಲವೆಂದಲ್ಲ: ನನ್ನಮಟ್ಟಿಗೆ ಹೇಳುವುದಾದರೆ ನಾನೊಬ್ಬ ಹೆಚ್ಚುಕಡಿಮೆ ಹಾಡುಗಿವುಡ, ಅಥವಾ ಪೂರ್ತಿ ಹಾಡುಗಿವುಡ. ಅಲ್ಲದೇ ನಿಜ ಸಂಗತಿ ಏನೆಂದರೆ ನಾನು ಯಾರ ಸಂಗೀತವನ್ನೂ ಕೇಳಿಲ್ಲ."

ಮುದುಕನ ಮೋರೆಯ ಮೇಲೆ ಕಳವಳದ ಗವಸು ಮುಸುಕಿತು. ಹಠಾ ತ್ತಾಗಿ ಅವರೆಂದರು "ದಯಮಾಡಿ ನನ್ನ ಜೊತೆ ಬನ್ನಿ."

ಅವರೆದ್ದರು. ನನ್ನ ಕೈಸೆಳೆದರು. ನಾನೂ ಎದ್ದೆ. ಆ ಜನನಿಬಿಡ ಕೊಠಡಿಯ ಅಡ್ಡ ಅವರು ಹಾದಿ ಬಿಡಿಸುತ್ತ ನನ್ನನ್ನು ಕರೆದೊಯ್ದಂತೆ ಸಂಕೋಚದಿಂದ ಕುಸಿದೇಹೋದೆ. ಕಣ್ಣೋಟ ಜಮಖಾನದ ಮೇಲೆ ನೆಟ್ಟಿತ್ತು. ಸಭಾಸದರ ಚಕಿತ ಊಹೆ ಮೆಲುನುಡಿಯ ತೆಳುತೆರೆಯಾಗಿ ನಮ್ಮನ್ನು ಅನುಸರಿಸಿತು. ಆದರೆ ಐನ್‌ಸ್ಟೈನ್ ಅದನ್ನು ಲಕ್ಷ್ಯಕ್ಕೆ ತೆಗೆದು ಕೊಳ್ಳಲಿಲ್ಲ.

ಸಂಕಲ್ಪದೃಢರಾದ ಅವರು ನನ್ನನ್ನು ಉಪ್ಪರಿಗೆಗೆ ಕರೆದೊಯ್ದರು. ಆ ಸೌಧದ ಒಳಹೊರಗು ಅವರಿಗೆ ಚೆನ್ನಾಗಿ ತಿಳಿದಿತ್ತೆಂಬುದು ಸ್ಪಷ್ಟ. ಅಲ್ಲೊಂದು ಕೋಣೆಯ ಕದ ತೆರೆದರು. ಪುಸ್ತಕಗಳನ್ನು ಓರಣವಾಗಿ ಜೋಡಿಸಿಟ್ಟಿದ್ದ ಅಧ್ಯಯನ ಕೊಠಡಿ ಅದು. ಒಳಕ್ಕೆ ನನ್ನನ್ನು ಸೆಳೆದುಕೊಂಡು ಕದವಿಕ್ಕಿದರು.

ತುಸು ಅತೃಪ್ತ ನಗು ಬೀರಿ ಅವರೆಂದರು "ಈಗ ದಯಮಾಡಿ ಹೇಳಿ: ಸಂಗೀತದ ಬಗ್ಗೆ ನಿಮ್ಮ ಈ ತಿರಸ್ಕಾರ ಮನೋಭಾವ ಎಷ್ಟು ಕಾಲದಿಂದಿದೆ?"

"ನನ್ನ ಬಾಳಿನುದ್ದಕ್ಕೂ" ನನ್ನ ಬಗೆಗೆ ನನಗೇ ಅಸಹ್ಯವೆನ್ನಿಸಿತು, "ಡಾಕ್ಟರ್ ಐನ್‌ಸ್ಟೈನ್ ಅವರೇ! ನೀವು ಕೆಳಗಿಳಿದು ಹಿಂತಿರುಗಿ ಹೋಗಿ ಗಾನರಸವೀಂಟುವ ಸುಖದಲ್ಲಿ ಭಾಗಿಗಳಾಗಬೇಕೆಂಬುದು ನನ್ನ ಬೇಡಿಕೆ. ನನಗೆ ಆ ಸುಖ ಒದಗದು ಎಂಬುದು ತೀರ ಗೌಣ."

ಅವರು ಗೋಣಾಡಿಸಿ ಹುಬ್ಬುಗಂಟಿಕ್ಕಿ ದುರುಗುಟ್ಟಿ ದಿಟ್ಟಿಸಿದರು: ನಾನು ಅನುಚಿತವಾದದ್ದನ್ನು ಗಳಹಿದೆನೊ ಎಂಬಂತೆ.

"ದಯವಿಟ್ಟು ಹೇಳಿ" ಅವರೆಂದರು, "ನೀವು ನಿಜವಾಗಿ ಮೆಚ್ಚುವ ಯಾವುದಾದರೂ ಬಗೆಯ ಸಂಗೀತವಿರಬಹುದಷ್ಟೆ."

"ಏನು ಹೇಳಲಿ? ಪದಗಳಿರುವ ಹಾಡುಗಳು ಮತ್ತು ಧಾಟಿ ಹಿಡಿಯಲು ಸಾಧ್ಯವಾಗುವ ಧಾತು ನನಗೆ ಹಿತವೆನಿಸುತ್ತವೆ."

ಅವರು ನಸುನಕ್ಕು ತಲೆದೂಗಿದರು. ನಿಜಕ್ಕೂ ನನ್ನ ನುಡಿ ಅವರಿಗೆ ಪ್ರಿಯ ವಾಗಿತ್ತು.

"ಒಂದು ಉದಾಹರಣೆ ಕೊಡಬಲ್ಲಿರಾ?"

ಇನ್ನೇನು ಗತಿ! "ಬಿಂಗ್ ಕ್ರಾಸ್‌ಬೀ ಹಾಡಿರುವ ಹೆಚ್ಚುಕಡಿಮೆ ಪ್ರತಿ ಯೊಂದೂ" ಎಂದೆ.

"ಭಲೇ!" ಅವರೀಗ ತಲೆಯನ್ನು ಭರದಿಂದ ಮಗುದೊಮ್ಮೆ ಆಡಿಸಿದರು.

ಕೊಠಡಿಯ ಮೂಲೆಗೆ ಹೋದರು. ಅಲ್ಲಿದ್ದ ಗ್ರಾಮೊಫೋನನ್ನು ತೆರೆ ದರು. ಅದರೊಳಗಿನಿಂದ ಗಾನಮುದ್ರಿಕೆಗಳನ್ನು ಆಯತೊಡಗಿದರು. ಚಡಪಡಿ

ಸುತ್ತ ನಾನವರನ್ನು ಗಮನಿಸುತ್ತಿದ್ದೆ. ಕಟ್ಟಕಡೆಗೆ ಅವರು "ಆಹಾ!" ಎಂದು ಉಲ್ಲಸಿತರಾಗಿ ಉದ್ಗರಿಸಿದರು.

ಆ ಗಾನಮುದ್ರಿಕೆಯನ್ನು ಅವರು ಹಾಡಹಚ್ಚಿದರು. ಮರುಕ್ಷಣ ಇಡೀ ಕೊಠಡಿ ಬಿಂಗ್ ಕ್ರಾಸ್‌ಬೀಯ "ವ್ಹೇರ್ ದಿ ಬ್ಲೂ ಆಫ್ ದಿ ನೈಟ್ ಮೀಟ್ಸ್ ದಿ ಗೋಲ್ಡ್ ಆಫ್ ದಿ ಡೇ" (ಇರುಳ ನೀಲಿಮೆಯಲ್ಲಿ ಹಗಲ ಬಂಗಾರದಲಿ ಕರಗುವುದೋ) ಎಂಬ ಹಾಡಿನ ಶ್ರಾಂತ ಲಯಬದ್ಧ ವಿನ್ಯಾಸ ದಿಂದ ತುಂಬಿ ತುಳುಕಿತು. ಐನ್‌ಸ್ಟೈನ್ ನನ್ನತ್ತ ಮೃದುಹಾಸ ಸೂಸಿದರು. ಜೊತೆಯಲ್ಲೇ ತಮ್ಮ ಹೊಗೆ ಕೊಳವೆಯ ಕಾಂಡದ ನೆರವಿನಿಂದ ತಾಳ ಮಿಡಿಯತೊಡಗಿದರು. ಮೂರು ಅಥವಾ ನಾಲ್ಕು ಚರಣಗಳು ಮುಗಿಯು ವಷ್ಟರಲ್ಲಿ ಅವರು ಗ್ರಾಮೊಫೋನನ್ನು ನಿಲ್ಲಿಸಿಬಿಟ್ಟರು.

"ಇದೀಗ ತಾನೇ ನೀವು ಏನು ಆಲಿಸಿದಿರಿ ಎಂಬುದನ್ನು ನನಗೆ ಹೇಳೋಣ ವಾಗಲಿ" ಎಂದರು.

ಆ ಸಾಲುಗಳನ್ನು ಹಾಡಿ ತೋರಿಸುವುದೇ ಅತ್ಯಂತ ಸರಳಮಾರ್ಗವೆಂದು ಅನ್ನಿಸಿತು. ನಾನು ಅನುಸರಿಸಿದ್ದಾದರೂ ಇದನ್ನೇ. ಆ ಧಾಟಿಯನ್ನು ಅನುಕರಿಸಲು ಮತ್ತು ನನ್ನ ಗಂಟಲು ಒಡೆದು ಕೀರಲು ಧ್ವನಿ ಇರಿಯದಿರು ವಂತೆ ಮಾಡಲು ವಿಶ್ವಪ್ರಯತ್ನಪಟ್ಟೆ. ಆಗ ಐನ್‌ಸ್ಟೈನರ ಮುಖಭಾವ ನವ ಅರುಣೋದಯದಂತಿತ್ತು.

ನಾನು ಮುಗಿಸಿದಾಗ ಅವರು ಹರ್ಷಾತಿಶಯದಿಂದ ಕೂಗಿ ಹೇಳಿದರು "ನೋಡಿದಿರಾ! ನಿಮಗೆ ಖಾತ್ರಿ ಇದೆ ಕೇಳ್ಮೆ!"

ಇದು ನನಗೆ ಅತ್ಯಂತ ಪ್ರಿಯವಾದ ಹಾಡುಗಳ ಪೈಕಿ ಒಂದು, ಸಾವಿರಾರು ಸಲ ಇದನ್ನು ಕೇಳಿದ್ದೇನೆ. ಆದ್ದರಿಂದ ಇದೀಗತಾನೇ ನಾನು ಪ್ರದರ್ಶಿಸಿದ ಅನುಕರಣೆ ಏನನ್ನೂ ರುಜುವಾತಿಸುವುದಿಲ್ಲ ಎಂದು ಮುಂತಾಗಿ ಗುಣು ಗುಟ್ಟಿದೆ.

"ಶುದ್ಧಾಂಗ ತಪ್ಪು!" ಎಂದರು ಐನ್‌ಸ್ಟೈನ್, "ಇದು ಪ್ರತಿಯೊಂದನ್ನೂ ರುಜುವಾತಿಸುತ್ತದೆ! ಶಾಲೆಯಲ್ಲಿ ನೀವು ಕಲಿತ ಅಂಕಗಣಿತದ ಪ್ರಥಮ ಪಾಠ ನಿಮ್ಮ ನೆನಪಿನಲ್ಲಿದೆಯೇ? ಸಂಖ್ಯೆಗಳ ಜೊತೆ ಮೊದಲ ಬಾರಿಗೆ ಒದಗಿದ ಸಂಪರ್ಕದಲ್ಲಿ ನಿಮ್ಮ ಅಧ್ಯಾಪಕ ಉದ್ದುದ್ದ ಭಾಗಾಹಾರದ ಅಥವಾ ಭಿನ್ನರಾಶಿಗಳ ಮೇಲೆ ಕೆಲಸ ಮಾಡಿ ಎಂದು ವಿಧಿಸಿದ್ದರೆ ಅದು ನಿಮಗೆ ಸಾಧ್ಯವಾಗುತ್ತಿತ್ತೇ?"

"ಇಲ್ಲ, ಖಂಡಿತ ಆಗುತ್ತಿರಲಿಲ್ಲ."

"ಹ್ಞಾ ! ಅದೇ ನಾನು ಕೂಡ ಹೇಳುತ್ತಿರುವುದು !" ಹೊಗೆಕೊಳವೆಯ ದಿಂಡನ್ನು ಗೆಲವಿನ ಸೂಚಕವಾಗಿ ಬೀಸಿ "ಅದು ಅಸಾಧ್ಯವಾಗಿರುತ್ತಿತ್ತು, ಮತ್ತು ನೀವು ಕಂಗಾಲಾಗಿರುತ್ತಿದ್ದಿರಿ. ಉದ್ದುದ್ದ ಭಾಗಾಹಾರ ಮತ್ತು ಭಿನ್ನರಾಶಿಗಳನ್ನು ಕುರಿತಂತೆ ನಿಮ್ಮ ಮನದ ಪಡಿಗಳನ್ನು ಮುಚ್ಚಿಯೇ ಬಿಟ್ಟಿರುತ್ತಿದ್ದಿರಿ. ತತ್ಫಲಿತಾಂಶವಾಗಿ—ಅಧ್ಯಾಪಕನ ಆ ಒಂದು ಪುಟ್ಟ ಪ್ರಮಾದದಿಂದಾಗಿ—ಇಡೀ ಬದುಕಿನಲ್ಲಿ ನಿಮಗೆ ದೀರ್ಘ ಭಾಗಾಹಾರ ಹಾಗೂ ಭಿನ್ನರಾಶಿಗಳ ಸೌಂದರ್ಯವೇ ಅಲಭ್ಯವಾಗಿರುತ್ತಿತ್ತು" ಎಂದರು.

ಕೊಳವೆಯ ಕಾಂಡ ಮೇಲೂ ಕೆಳಗೂ ಅಲೆಅಲೆಯಾಗಿ ಅಲುಗಾಡಿತು.

"ಆದರೆ ಪ್ರಥಮ ದಿವಸದಂದು ಯಾವ ಅಧ್ಯಾಪಕನೂ ಇಂಥ ಮುಠ್ಠಾಳತನ ಪ್ರದರ್ಶಿಸಲಾರ. ಆತ ಮೊದಲು ನಿಮ್ಮನ್ನು ಪ್ರಾಥಮಿಕ ವಿಷಯಗಳಿಗೆ ಪ್ರವೇಶಗೊಳಿಸುತ್ತಾನೆ. ತರುವಾಯ, ನೀವು ಅತ್ಯಂತ ಸರಳ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ಕೌಶಲ ಗಳಿಸಿದಂತೆ, ನಿಮ್ಮನ್ನು ದೀರ್ಘ ಭಾಗಾಹಾರ ಮತ್ತು ಭಿನ್ನರಾಶಿಗಳಿಗೆ ಒಯ್ಯುತ್ತಾನೆ.

"ಸಂಗೀತದಲ್ಲಿಯೂ ಹಾಗೆಯೇ" ಎನ್ನುತ್ತ ಐನ್‌ಸ್ಟೈನ್ ಬಿಂಗ್ ಕ್ರಾಸ್‌ಬೀ ಗಾನಮುದ್ರಿಕೆಯನ್ನು ಕೈಗೆತ್ತಿಕೊಂಡರು, "ಈ ಸರಳ ಮೋಹಕ ಮತ್ತು ಪುಟ್ಟ ಹಾಡು ಸಂಕಲನ ಅಥವಾ ವ್ಯವಕಲನದಂತೆ. ನೀವಿದರಲ್ಲಿ ಪ್ರಭುತ್ವ ಗಳಿಸಿರುವಿರಿ. ಈಗ ಹೆಚ್ಚು ಜಟಿಲವಾದ ಬೇರೊಂದಕ್ಕೆ ಹೋಗೋಣ."

ಇನ್ನೊಂದು ಗಾನಮುದ್ರಿಕೆಯನ್ನು ಹುಡುಕಿ ಅದನ್ನು ಹಾಡಹಚ್ಚಿದರು. 'ದಿ ಟ್ರಂಪೆಟರ್' ಅನ್ನು (ತುತ್ತೂರಿಗಾರ) ಹಾಡಿದ ಜಾನ್‌ಮೆಕ್ ಕೊರ್ಮಾಕನ ಕಂಚುಕಂಠದಿಂದ ಇಡೀ ಕೊಠಡಿ ಅನುರಣಿಸಿತು. ಕೆಲವೇ ಸಾಲುಗಳು ಮುಗಿಯುವಷ್ಟರಲ್ಲಿ ಐನ್‌ಸ್ಟೈನ್ ಆ ಗಾನಮುದ್ರಿಕೆಯನ್ನು ನಿಲ್ಲಿಸಿಬಿಟ್ಟರು.

ಅವರೆಂದರು "ಈಗ ನೀವಿದನ್ನು ಹಾಡಿ ತೋರಿಸುವಿರಷ್ಟೆ ?"

ಹಾಗೆಯೇ ಮಾಡಿದೆ. ಆತ್ಮಪ್ರಜ್ಞೆ ತೀವ್ರವಾಗಿ ಬಾಧಿಸುತ್ತಿತ್ತು. ಆದರೆ ಖುದ್ದು ನನಗೇ ಅಚ್ಚರಿ ಆಗುವಂತೆ ನಿಖರತೆಯ ಮಟ್ಟ ಉತ್ಕೃಷ್ಟವಾಗಿತ್ತು. ಐನ್‌ಸ್ಟೈನ್ ನನ್ನನ್ನೇ ದಿಟ್ಟಿಸಿ ನೋಡುತ್ತಿದ್ದರು. ಅವರ ಮುಖದಲ್ಲಿ ಮೂಡಿದ್ದ ಭಾವವನ್ನು ನನ್ನ ಬದುಕಿನಲ್ಲಿ ತತ್ಪೂರ್ವ ಒಮ್ಮೆ ಮಾತ್ರ ಗಮನಿಸಿದ್ದೆ : ಶಾಲಾ ಶಿಕ್ಷಣದ ಕೊನೆಯ ಮಜಲಿನಲ್ಲಿ ನಾನು ಮಾಡಿದ ಮುಕ್ತಾಯ ಭಾಷಣ ಆಲಿಸುತ್ತಿದ್ದಾಗ ನನ್ನ ತಂದೆಯ ಮುಖದ ಮೇಲೆ.

ನಾನು ಮುಗಿಸುತ್ತಿದ್ದಂತೆ ಐನ್‌ಸ್ಟೈನ್ "ಪರಮೋತ್ಕೃಷ್ಟ" ಎಂದು ಉದ್ಗರಿಸಿ, "ಅದ್ಭುತವಾಗಿದೆ ! ಈಗ ಇದು" ಎಂದರು.

ಈ 'ಇದು' ಏನು ಗೊತ್ತೇ ? ಕರೂಸೊ ಹಾಡಿದ 'ಕ್ಯಾವಲೇರಿಯ ರಸ್ಟಿಕಾನ'ದಿಂದ ಆಯ್ದ ಒಂದು ಭಾಗ. ನನಗದರ ತಲೆಬುಡ ಹತ್ತಲಿಲ್ಲ. ಹಾಗಿದ್ದರೂ ನಾನು ಆ ಸುಪ್ರಸಿದ್ಧ ತಾರಸ್ಥಾಯಿ ಗಾಯಕನ ಧ್ವನಿಗೆ ಸನ್ನಿಹಿತವಾದದ್ದನ್ನು ಪುನರುತ್ಪಾದಿಸಿದೆ. ಐನ್‌ಸ್ಟೈನ್ ಅನುಮೋದನೆಯ ದರಹಾಸ ಬೆಳಗಿದರು.

ಕರೂಸೊ ಆದ ಬಳಿಕ ಕನಿಷ್ಠ ಪಕ್ಷ ಒಂದು ಡಝನ್ ಇತರರು ಬಂದರು. ನನಗೆ ಈ ಮಹಾಪುರುಷನ ಸಹವಾಸ ಲಭಿಸಿದ್ದೊಂದು ಆಕಸ್ಮಿಕ ಯೋಗ. ಆದರೆ ನಾನೊಬ್ಬನೇ ಇವರ ಏಕೈಕ ಆಶ್ರಯಭಾಗಿ ಎಂಬ ತದೇಕಚಿತ್ತದಿಂದ ಇವರು ನಾವೆಸಗುತ್ತಿದ್ದ ಕಾರ್ಯಕಲಾಪಗಳಲ್ಲಿ ಮಗ್ನರಾಗಿದ್ದ ರೀತಿ ಕಂಡ ನನ್ನಲ್ಲಿ ಇವರ ಬಗ್ಗೆ ತಂತಾನೇ ಪ್ರಗಲ್ಭ ಭಕ್ತಿಭಾವ ಉಕ್ಕಿತು.

ಅಂತಿಮವಾಗಿ ನಾವು ಪದರಹಿತ ಸಂಗೀತದ ಗಾನಮುದ್ರಿಕೆಗಳ ಹಂತವೇರಿದೆವು. ಆ ಧಾಟಿಗಳನ್ನು ನಾನು ಗುಂಯ್‌ಗುಡುತ್ತ ದನಿಗೂಡಿಸಿ ಪುನರುತ್ಪಾದಿಸಬೇಕೆಂದು ಅವರು ನಿರ್ದೇಶಿಸಿದರು. ತಾರಸ್ಥಾಯಿಯ ಒಂದು ಸ್ವರವನ್ನು ತಲಪಲೆಳಸಿದಾಗ ನನಗೆ ಅಗಮ್ಯವಾದುದನ್ನು ಗಮ್ಯವಾಗಿಸಲು ನೆರವು ನೀಡಲೋ ಎಂಬಂತೆ ಐನ್‌ಸ್ಟೈನ್ ತುಟಿ ಬಿರಿದು ತಲೆ ಸೆಟೆದರು. ನಾನು ತೀರ ಹತ್ತಿರವಿದ್ದೆ ಎಂಬುದು ಸ್ಪಷ್ಟ. ಏಕೆಂದರೆ ಅವರು ಹಠಾತ್ತಾಗಿ ಗ್ರಾಮೊಫೋನನ್ನು ನಿಲ್ಲಿಸಿಯೇಬಿಟ್ಟರು.

"ತರುಣ ಮಿತ್ರ !" ನನ್ನ ಕೈಗೆ ತಮ್ಮ ಕೈ ಪೋಣಿಸುತ್ತ ಅವರೆಂದರು, "ಈಗ ನಾವು ಬಾಕ್‌ನನ್ನು ಕೇಳಲು ಸಿದ್ಧ !"

ಸಂಗೀತ ನಡೆಯುತ್ತಿದ್ದ ಕೊಠಡಿಯಲ್ಲಿಯ ನಮ್ಮ ಆಸನಗಳಿಗೆ ಮರಳುತ್ತಿದ್ದಾಗ ಮೇಳಕಾರರು ಹೊಸದೊಂದು ಕೃತಿಯನ್ನು ನುಡಿಸಲು ಶ್ರುತಿಗೈಯುತ್ತಿದ್ದರು.

ಐನ್‌ಸ್ಟೈನ್ ಪಿಸುನುಡಿದರು "ಆಲಿಸಲು ತಯಾರಾಗಿ. ಅಷ್ಟು ಮಾತ್ರ ಸಾಕು"

ನಿಜಕ್ಕೂ ಅಷ್ಟುಮಾತ್ರವೇ ಅಲ್ಲವೆಂಬುದು ಕಂಡಂತೆಯೇ ಇದೆ. ಪೂರ್ತಿ ಅಪರಿಚಿತನೊಬ್ಬನ ಮೇಲೆ ಅವರು ಆದಾಗ ತಾನೇ ಆತ್ಮೀಯತೆಯಿಂದ ಧಾರೆಯೆರೆದ ಆ ವಿಶೇಷ ಪ್ರಯತ್ನವಲ್ಲದಿದ್ದರೆ ನಾನೆಂದೂ ನನ್ನ ಬದುಕಿನಲ್ಲೇ ಮೊದಲ ಬಾರಿಗೆ ಬಾಕ್‌ನ 'ಶೀಪ್ ಮೇ ಸೇಫ್ಲಿ ಗ್ರೇಝ್' ಅನ್ನು (ಕುರಿ

ಮುಂದೆ ನಿರ್ಭಯದಿಹುಲ್ಲುಮೇಯಲುಬಹುದು) ಆ ಇರುಳಿನಂತೆ ಆಲಿಸುತ್ತಲೇ ಇರಲಿಲ್ಲ. ಅಂದಿನಿಂದೀಚೆಗೆ ನಾನಿದನ್ನು ಅನೇಕ ಬಾರಿ ಕೇಳಿ ಆನಂದಿಸಿದ್ದೇನೆ. ಎಂದಾದರೂ ಇದರಲ್ಲಿ ನನಗೆ ಬಿಡಿಚಲು ಬಡಿದೀತೆಂದು ಅನ್ನಿಸುವುದಿಲ್ಲ. ಏಕೆಂದರೆ ಇದನ್ನು ಎಂದೂ ನಾನು ಒಂಟಿಯಾಗಿ ಆಲಿಸುತ್ತಿಲ್ಲ. ಕೆದರಿದ ಬಿಳಿ ಗೂದಲು ಇಳಿಬಿದ್ದಿರುವ, ಆರಿಹೋದ ಹೊಗೆಕೊಳವೆಯನ್ನು ಹಲ್ಲುಗಳ ನಡುವೆ ಕಚ್ಚಿರುವ, ಮತ್ತು ತಮ್ಮ ಅಸಾಧಾರಣ ವಾತ್ಸಲ್ಯಮಯ ನಯನಗಳಲ್ಲಿ ಪ್ರಪಂಚದ ಸಕಲವಿಸ್ಮಯವನ್ನೂ ತುಂಬಿಕೊಂಡಿರುವ ಪುಟ್ಟಗಾತ್ರದ ತುಂಬು ಪ್ರೈಯ್ಯ ಒಬ್ಬ ವ್ಯಕ್ತಿಯ ಜೊತೆ ಸದಾ ನಾನು ಕುಳಿತೇ ಇರುತ್ತೇನೆ.

ಸಂಗೀತ ಕಛೇರಿ ಕೊನೆಗೊಂಡಾಗ ನಾನೂ ನನ್ನ ಹಾರ್ದಿಕ ಹರ್ಷಘೋಷವನ್ನು ಇತರರ ಜೊತೆ ದನಿಗೂಡಿಸಿದೆ.

ಇದ್ದಕ್ಕಿದ್ದಂತೆ ನಮ್ಮ ಆತಿಥೇಯ ಮಹಿಳೆ ನಮ್ಮೆದುರು ಪ್ರತ್ಯಕ್ಷಳಾದಳು. "ಡಾಕ್ಟರ್ ಐನ್‌ಸ್ಟೈನ್ ಅವರೇ! ನನಗೆ ತುಂಬ ವ್ಯಥೆ ಆಗುತ್ತದೆ" ಎನ್ನುತ್ತ ನನ್ನೆಡೆಗೆ ಕೊರೆವ ಶೀತಲದೃಷ್ಟಿ ಕುತ್ತಿ, "ನೀವು ಬ್ರೈರಕ್ಕಿನ ಅಷ್ಟೊಂದು ಉತ್ಕೃಷ್ಟ ಭಾಗವನ್ನು ಕಳೆದುಕೊಂಡಿರಲ್ಲ ಎಂಬ ಕಾರಣಕ್ಕಾಗಿ ಎಂದಳು.

ಐನ್‌ಸ್ಟೈನ್ ಮತ್ತು ನಾನು ತಟಕ್ಕನೆ ಎದ್ದು ನಿಂತೆವು. "ನನಗೆ ಕೂಡ ವ್ಯಥೆ ಆಗುತ್ತದೆ" ಅವರೆಂದರು, "ಆದರೆ ಈ ತರುಣ ಮಿತ್ರ ಮತ್ತು ನಾನು ಮಾನವನಿಂದ ಸಾಧ್ಯವಾಗಬಲ್ಲ ಪರಮಭವ್ಯ ಚಟುವಟಿಕೆಯಲ್ಲಿ ಮಗ್ನರಾಗಿದ್ದೆವು."

ಆಕೆ ಬೆರಗುಗೊಂಡವಳಂತೆ ಕಂಡಳು. "ನಿಜಕ್ಕೂ!" ಎನ್ನುತ್ತ, "ಅದೇನು ?" ಎಂದು ಪ್ರಶ್ನಿಸಿದಳು.

ಐನ್‌ಸ್ಟೈನರ ಪ್ರಸನ್ನ ವದನದಲ್ಲಿ ಮಂದಹಾಸ ವಿಕಸಿಸಿತು. ನನ್ನ ಭುಜಗಳನ್ನು ತಮ್ಮ ಕೈಯಿಂದ ನೇವರಿಸುತ್ತ ಅಷ್ಟ ಪದಗಳನ್ನು ಉಸುರಿದರು. ತನ್ನ ಜೀವಮಾನ ಪರ್ಯಂತ ಅವರಿಗೆ ಋಣಿ ಆಗಿರುವ ಕನಿಷ್ಠ ಪಕ್ಷ ಒಬ್ಬನಿಗಾದರೂ ಆ ವಾಕ್ಯ ಅವರ ಚರಮಶ್ಲೋಕವಾಗಿತ್ತು: "ಸೌಂದರ್ಯ ಸೀಮೆಯ ಸರಹದ್ದಿನ ಇನ್ನೂ ಒಂದು ಅಂಶವನ್ನು ಅನಾವರಣಗೊಳಿಸುವ ಕ್ರಿಯೆ."

'ಕನ್ನಡ ಅನುವಾದಕನ ಟಿಪ್ಪಣಿ,' 'ಪಾರಿಭಾಷಿಕ ಪದಗಳು,' 'ಐನ್‌ಸ್ಟೈನ್‌ವಾಣಿ' 'ವಿಷಯ-ಪುಟ ಸೂಚಿ'(ಪುಸ್ತಕದ ಕೊನೆಯಲ್ಲಿ ಬರುತ್ತವೆ) ಮತ್ತು ಈ 'ಅರಿಕೆ' ಎಂಬ (ಮೂಲ ಇಂಗ್ಲಿಷ್ ಗ್ರಂಥದಲ್ಲಿ ಇರದ) ಐದು ಹೆಚ್ಚಿನ ಬಾಬುಗಳನ್ನು ಈ ಪುಸ್ತಕದಲ್ಲಿ ಸೇರಿಸಿದೆ. ಅದೇ ವೇಳೆ ಮೂಲ ಗ್ರಂಥದಲ್ಲಿರುವ ಜರ್ಮನ್ ಪಠ್ಯಭಾಗವನ್ನು(ವಾಸ್ತವವಾಗಿ ಇದು ಇಂಗ್ಲಿಷ್ ಅನುವಾದದ ಮೂಲವಸ್ತು)ಕೈಬಿಟ್ಟಿದೆ—ಆದರೆ ಈ ಪುಸ್ತಕ ಇಂಗ್ಲಿಷಿನಿಂದ ಕನ್ನಡಕ್ಕೆ ಮಾಡಿರುವ ಅನುವಾದ.

ಇಂಗ್ಲಿಷ್ ಮೂಲದ ಧ್ವನ್ಯರ್ಥ, ಅನ್ವಯ, ಅಲಂಕಾರ ಮುಂತಾದ ನವುರು ಮಗ್ಗುಲುಗಳ ಬಗ್ಗೆ ಸಂದೇಹ ಬಂದಾಗ ಪ್ರೊ. ಎಚ್. ಜಿ. ಸೂರ್ಯನಾರಾಯಣರಾಯರ* ನೆರವನ್ನು ಎಂದಿನಂತೆ ಧಾರಾಳವಾಗಿ ಪಡೆದಿದ್ದೇನೆ. ಕನ್ನಡ ಓದುಗರ ಸೌಕರ್ಯವನ್ನು ಲಕ್ಷ್ಯದಲ್ಲಿರಿಸಿಕೊಂಡು 'ಟಿಪ್ಪಣಿ'ಯನ್ನು ತಯಾರಿಸಿದ್ದಾಗಿದೆ. ಈ ಕಾರ್ಯದಲ್ಲಿ ನನಗೆ ವಿಶೇಷ ನೆರವು ನೀಡಿ ಉಪಕರಿಸಿದವರು ಡಾ. ಜಿ. ಶ್ರೀನಿವಾಸನ್ ಮತ್ತು ಶ್ರೀ ಡಿ.ವಿ.ಕೆ. ಮೂರ್ತಿ. ಈ ಎಲ್ಲ ಜ್ಞಾನಭಿಕ್ಷುಗಳಿಗೆ ಹಾರ್ದಿಕ ಅಭಿವಂದನೆಗಳನ್ನು ಸಲ್ಲಿಸುತ್ತೇನೆ.

ಈ ಪುಸ್ತಕವನ್ನು ಮುದ್ರಿಸಿರುವ ಮೈಸೂರು ಪ್ರಿಂಟಿಂಗ್ ಆಂಡ್ ಪಬ್ಲಿಷಿಂಗ್ ಹೌಸಿನ ಶ್ರೀ ಜಿ. ಎಚ್. ರಾಮರಾವ್* ಮತ್ತು ಶ್ರೀ ಜಿ. ಎಚ್. ಕೃಷ್ಣಮೂರ್ತಿ ಹಾಗೂ ಇವರ ಕಾರ್ಮಿಕ ಬಳಗದವರನ್ನೂ ಪ್ರಕಾಶಿಸಿರುವ ಶ್ರೀ ಡಿ.ವಿ.ಕೆ. ಮೂರ್ತಿಯವರನ್ನೂ ತುಂಬಿದೆದೆಯಿಂದ ವಂದಿಸುತ್ತೇನೆ.

೨೬ ಜೂನ್ ೧೯೮೧ ಜಿ. ಟಿ. ನಾರಾಯಣರಾವ್
'ಅತ್ರಿ' ಕಾಮಾಕ್ಷಿ ಆಸ್ಪತ್ರೆ ರಸ್ತೆ
ಕುವೆಂಪುನಗರ
ಮೈಸೂರು ೫೭೦ ೦೨೩

* ಇವರುಗಳ ಅಕಾಲ ಮರಣವನ್ನು ವಿಷಾದಪೂರ್ವಕವಾಗಿ ಇಲ್ಲಿ ವರದಿ ಮಾಡಬೇಕಾಗಿದೆ (೧೯೯೨).

## ಎರಡನೆಯ ಆವೃತ್ತಿ ಕುರಿತು

ಇಂಥ ಗಂಭೀರ ವಸ್ತುವಿಗೆ ಇಂದಿಗೂ ಗ್ರಾಹಕರು ಇರುವರೆಂಬುದು ಅಭಿಮಾನದ ಸಂಗತಿ.

ಐನ್‌ಸ್ಟೈನ್ (೧೮೭೯-೧೯೫೫) ಕೇವಲ ಒಬ್ಬ ವಿಜ್ಞಾನ ಸೀಮಾ ಪುರುಷ ಅಲ್ಲ, ಮನುಕುಲದ ಪರಮಪಕ್ವತೆಯ ಮೂರ್ತರೂಪ ಕೂಡ. ಸಾಕ್ರಟೀಸನ ಸತ್ಯಬದ್ಧತೆ, ಬುದ್ಧನ ಲೋಕಕಾರುಣ್ಯ, ಆರ್ಕಿಮಿಡೀಸನ ಅನ್ವೇಷಣಶೀಲತೆ ಮತ್ತು ನ್ಯೂಟನ್ನನ ವಿಜ್ಞಾನಪಾರಮ್ಯ ಬೆಸುಗೆಗೊಂಡು ಇವರ ವ್ಯಕ್ತಿತ್ವ ವೈದಳೆದಿದೆ. "ಇಂಥವನೊಬ್ಬ ಈ ನೆಲದಲ್ಲಿ ಎಂದಾದರೂ ರಕ್ತಮಾಂಸಭರಿತನಾಗಿ ಅಡ್ಡಾಡಿದುದು ನಿಜವಿರಬಹುದೇ ಎಂದು ಮುಂಬರಲಿರುವ ಪೀಳಿಗೆಗಳು ಸಂದೇಹಿಸುವುದು ಸಾಧ್ಯ" ಎಂಬುದಾಗಿ ಐನ್‌ಸ್ಟೈನ್ ೧೯೩೦ರಲ್ಲಿ ಗಾಂಧೀಜಿ ಕುರಿತು ಬರೆದಿದ್ದರು. ಸ್ವತಃ ಐನ್‌ಸ್ಟೈನರ ಬಗೆಗೇ ಈ ನುಡಿ ಎಷ್ಟು ಸಮಂಜಸ ಎನ್ನುವುದು ಐನ್‌ಸ್ಟೈನ್ ಯುಗದ ಸಂಜೆಬೆಳಕಿನಲ್ಲಿರುವ ನಮಗೆ ಚೆನ್ನಾಗಿ ತಿಳಿಯುತ್ತದೆ.

ಮಹತ್ತಿನ ಲಕ್ಷಣವೇ ಇದು: ಜೀವನದ ಯಾವುದೇ ಸನ್ನಿವೇಶಕ್ಕೆ ಇಲ್ಲವೇ ಸಮಸ್ಯೆಗೆ ಅದು ಸ್ಪಂದಿಸುವ ಪರಿ ಜೀವನಕ್ಕೆ ಬರೆದ ಭಾಷ್ಯವೇ ಆಗುತ್ತದೆ. ಈ ಕಾರಣದಿಂದ ಇಂಥ ಪುಸ್ತಕಗಳು ಸದಾ ಪ್ರಸ್ತುತ ಎನ್ನಿಸಿಕೊಳ್ಳುತ್ತವೆ.

ಪ್ರಸಕ್ತ ಆವೃತ್ತಿ ಮೊದಲನೆಯ ಆವೃತ್ತಿಯ (ಪ್ರಕಟಣೆ ೧೯೮೧) ಪರಿಷ್ಕೃತ ರೂಪ. ಇದನ್ನು ಪ್ರಕಟಿಸುತ್ತಿರುವ ಮಿತ್ರ ಶ್ರೀ ಡಿ. ವಿ. ಕೆ. ಮೂರ್ತಿಯವರಿಗೂ ಮುದ್ರಿಸುತ್ತಿರುವ ವಾಣೀ ಪ್ರೆಸ್‌ನ ಶ್ರೀ ಎ. ಜಿ. ಸುಪ್ರತೀಂದ್ರ ಮತ್ತು ಗೆಳೆಯರಿಗೂ ಹಾರ್ದಿಕ ನಮನಗಳು.

ಜಿ. ಟಿ. ನಾರಾಯಣರಾವ್

೩೦ ಏಪ್ರಿಲ್ ೧೯೯೩
೮ ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ
ಕುವೆಂಪುನಗರ
ಮೈಸೂರು ೫೭೦ ೦೨೩

ಆಲ್ಬರ್ಟ್ ಐನ್‌ಸ್ಟೈನ್ ತಮ್ಮ ಕಾಲದ ಪರಮ ಶ್ರೇಷ್ಠ ವಿಜ್ಞಾನಿಯಾಗಿದ್ದುದು ಮಾತ್ರವೇ ಅಲ್ಲ, ಖಚಿತವಾಗಿ ಅತ್ಯಂತ ಪ್ರಸಿದ್ಧ ವ್ಯಕ್ತಿ ಕೂಡ ಆಗಿದ್ದರು. ಅವರು ಕಾಗದಗಳಿಗೆ ಮಾರ್ಲೋಲೆ ಬರೆಯುತ್ತಿದ್ದರು. ಇವೆಲ್ಲ ಗುಣಗಳ ಮೇಳನ ಪ್ರಸಕ್ತ ಪುಸ್ತಕವನ್ನು ಸಾಧ್ಯಗೊಳಿಸಿದೆ.

*Albert Einstein : Creator and Rebel* ಎಂಬ ಹೆಸರಿನ ನಮ್ಮ ಹಿಂದಿನ ಪುಸ್ತಕ ಐನ್‌ಸ್ಟೈನರ ಜೀವನ ಚರಿತ್ರೆ. ಈಗಿನದು ಅಲ್ಲ. ಇದು ಅವರ ಭಾವನೆಗಳನ್ನು ವಿವರಿಸುವುದಿಲ್ಲ. ಇದರಲ್ಲಿ ಅಧ್ಯಾಯಗಳಿಲ್ಲ, ಒಳಪಿಡಿಗಳ ಯಾದಿ ಇಲ್ಲ, ವಿಷಯಪುಟಸೂಚಿ ಇಲ್ಲ ; ಮತ್ತು ಮೇಲುನೋಟಕ್ಕೆ ಯೋಜನೆಯಾಗಲಿ ವಾಸ್ತುಶಿಲ್ಪವಾಗಲಿ ಕಂಡುಬಾರದು. ಇದರ ಹೆಚ್ಚಿನ ಭಾಗ ಈತನಕ ಪ್ರಕಟವಾಗದ, ಅಂತೆಯೇ ಪ್ರಕಟಣೋದ್ದೇಶವಿಲ್ಲದೆ ಐನ್‌ಸ್ಟೈನ್ ಬರೆದ, ಪತ್ರಗಳನ್ನು ಒಳಗೊಂಡಿದೆ. ಇವು ಸ್ವಯಂಸ್ಪಷ್ಟವಾಗಿವೆ. ಎಂದೇ ಇಲ್ಲಿ ಅವನ್ನು ಇನ್ನೂ ಹೆಚ್ಚಿಗೆ ವಿವರಿಸುವ ಆವಶ್ಯಕತೆ ಇಲ್ಲ.

ಕೆಲವೊಂದು ಬಾಬುಗಳು ನಿರ್ದುಷ್ಟ ಇಂಗ್ಲಿಷಿನಲ್ಲಿ ಬರೆದು ರವಾನಿಸಿದಂಥವು. ಅವನ್ನು ಇಲ್ಲಿ ತದ್ವತ್ತವಾಗಿ ಉದ್ಧರಿಸಿದೆ. ಇತರ ಬಾಬುಗಳು ಅಷ್ಟೇನೂ ಶುದ್ಧ ನುಡಿಗಟ್ಟು ಇಂಗ್ಲಿಷಿನಲ್ಲಿಲ್ಲ. ಇವನ್ನು ಪ್ರಕಟಣೆಗೆ ಅಣಿಗೊಳಿಸುವಾಗ, ಇವುಗಳಿಗೆ ಸೊಗಸು ಪೂಸುವ ವಿಶಿಷ್ಟ ಜರ್ಮನ್ ಕಂಪನ್ನು ಉಳಿಸಿಕೊಂಡು, ಅತ್ಯಲ್ಪ ಬದಲಾವಣೆ ಮಾಡಿದ್ದೇವೆ. ಉಳಿದೆಲ್ಲ ಬಾಬುಗಳನ್ನೂ ಇಂಗ್ಲಿಷ್ ಅನುವಾದವಾಗಿ ಪ್ರದರ್ಶಿಸಿದೆ. ಇಂಗ್ಲಿಷಿನಲ್ಲಿ ಬರೆದ ಒಂದು ಕಾಗದ, ಅನೇಕ ವೇಳೆ, ಈಗಲೂ ಲಭ್ಯವಿರುವ ಜರ್ಮನ್ ಕರಡಿನ ಮೇಲೆ ಆಧರಿತವಾಗಿದ್ದುದುಂಟು. ಇಂಥ ಸಂದರ್ಭಗಳಲ್ಲಿ ಸ್ವತಂತ್ರವಾದ ಬೇರೊಂದು ಅನುವಾದವನ್ನು ಕೊಡುವುದರ ಬದಲು ವಾಸ್ತವವಾಗಿ ರವಾನಿಸಲಾದ ಇಂಗ್ಲಿಷ್ ರೂಪವನ್ನೇ ಕೊಟ್ಟಿದ್ದೇವೆ.

ಭಾವಾತೀತ ಸೌಂದರ್ಯದಿಂದ ಕೂಡಿದ ಸ್ವಂತ ವಿಜ್ಞಾನಕ್ಷೇತ್ರದಲ್ಲಿ ಮಾತ್ರವೇ ಅಲ್ಲ, ಯೋಗ್ಯ ಪದಪ್ರಯೋಗದಲ್ಲಿ ಕೂಡ ಐನ್‌ಸ್ಟೈನ್ ಕಲಾವಿದರಾಗಿದ್ದರು. ಜರ್ಮನ್ ಭಾಷೆ ತಿಳಿದಿರುವ ಓದುಗರು ಐನ್‌ಸ್ಟೈನ್ ಗದ್ಯದ ಸೊಬಗನ್ನು ನೇರವಾಗಿ ಗ್ರಹಿಸುವಂತಾಗಲೆಂಬ ಉದ್ದೇಶದಿಂದ ಈ ಪುಸ್ತಕದ ಉತ್ತರಾರ್ಧದಲ್ಲಿ ಮೂಲ ಜರ್ಮನ್ ಪಾಠಗಳನ್ನು ಅಥವಾ ಕರಡುಗಳನ್ನು ಅವು ಉಪಲಬ್ಧವಿದ್ದಲ್ಲೆಲ್ಲ ಸೇರಿಸಿದ್ದೇವೆ.[1]

ಶಾಂತಿ ಅನ್ವೇಷಣೆ ಐನ್‌ಸ್ಟೈನ್ ಜೀವನದ ಒಂದು ಮುಖ್ಯ ಅಂಗ. ವಸ್ತುತಃ ಈ ವಿಷಯಕ್ಕೆ *Einstein on Peace* (New York, Schocken Books) ಎಂಬ ಇಡೀ ಒಂದು ಪುಸ್ತಕವೇ ಮೀಸಲಾಗಿದೆ. ಅದರಲ್ಲಿಯ ವಸ್ತುಸಂಗ್ರಹ ಅದೆಷ್ಟು ಪರಿಪೂರ್ಣವಾಗಿದೆ ಎಂದರೆ ಈ ವಿಷಯದ ಮೇಲೆ ಅಪ್ರಕಟಿತ ವಸ್ತುವಿನ ಕಿರಿ ತುಣುಕು ಕೂಡ ಉದ್ಧರಿಸಲು ಬಾಕಿ ಉಳಿದಿರುವುದು ಅಸಂಭಾವ್ಯ. ಆದ್ದರಿಂದ ಐನ್‌ಸ್ಟೈನ್ ವ್ಯಕ್ತಿತ್ವದ ಈ ವಿವರಗಳನ್ನು ತಿಳಿಯಬಯಸುವ ಓದುಗರು ಆ ಪುಸ್ತಕವನ್ನು ಗಮನಿಸಬೇಕೆಂದು ಸೂಚಿಸುತ್ತೇವೆ. ಇಂತಿದ್ದರೂ ಅದರಿಂದ ಸುದೀರ್ಘಾಂಶವೊಂದನ್ನು ಇಲ್ಲಿ ಉದ್ಧರಿಸಿದ್ದೇವೆ. ಈ ಸೇರ್ಪಡೆಗೆ ಇಬ್ಬಗೆಯ ಸಮರ್ಥನೆ ಇದೆ: ಸಶಕ್ತ ನಿರೂಪಣೆಯಾಗಿ ಇದಕ್ಕೊಂದು ಸ್ವತಂತ್ರ ಅಸ್ತಿತ್ವ ಮತ್ತು ಪ್ರಕಟಣ ಅಂತಸ್ತು ಉಂಟು. ಇಲ್ಲಿ ಪುನರ್ಮುದ್ರಿಸಲೇಬೇಕೆಂಬ ನಮ್ಮ ಕಡುಹಂಬಲವಾದ *Einstein on Peace* ಪುಸ್ತಕದ ಇತರ ಎಲ್ಲ ಬಾಬುಗಳಿಗೂ ಸಾಂಕೇತಿಕ ನಮೂನೆವಾಗಿ ಬಂಧಿರುವ ಈ ಆಯ್ಕೆಗೆ ಒಂದು ಪ್ರತೀಕಾತ್ಮಕ ಔಚಿತ್ಯ ಉಂಟು.

ಬಾಬುಗಳನ್ನು ಪ್ರದರ್ಶಿಸುವ ಕ್ರಮ ಬೇಕಾಬಿಟ್ಟಿ ಏನೂ ಅಲ್ಲ. ಸಮೃದ್ಧ ಜೀವನವೊಂದರ ಪೂರ್ವಸ್ಮರಣೆಗಳ ದಟ್ಟಣೆಗೆ ಸದೃಶವಾಗಿದೆ ಈ ಕ್ರಮ— ಜ್ಞಾಪಕಶಕ್ತಿ ತನ್ನದೇ ಆದ ತರ್ಕಕ್ಕೆ ಅಧೀನವಾಗಿ ವರ್ಷಗಳ ಹರವಿನಲ್ಲಿ ಒಂದು ನೆನಪಿನಿಂದ ಇದಕ್ಕೆ ಹೊಂದುವ ಇನ್ನೊಂದಕ್ಕೆ ಹಿಂದೆ ಮುಂದೆ ಜಿಗಿ ಹಾಯುವಾಗ ಪ್ರತಿಯೊಂದು ಪಾಳಿಯಲ್ಲಿಯೂ ಅನಿರೀಕ್ಷಿತ ತಿರುವುಗಳನ್ನು ಎದುರಿಸುವಂತೆ. ಈ ಪುಸ್ತಕದಲ್ಲಿ ಇಂಥ ಅನೇಕ ಪಾಳಿಗಳಿವೆ. ಇವುಗಳ ಆರಂಭವನ್ನು, ಬಾಬುಗಳ ನಡುವೆ ಸಾಧಾರಣವಾಗಿಬಿಡುವ ತೆರಪಿಗಿಂತ ಹೆಚ್ಚಿಗೆ ಎದ್ದು ಕಾಣುವ ತೆರಪು ಬಿಟ್ಟು ಸೂಚಿಸಿದ್ದೇವೆ. ಪ್ರತಿಯೊಂದು ಬಾಬನ್ನೂ ಸ್ವತಂತ್ರವಾಗಿ ಓದಬಹುದು. ಆದರೆ ಈ ಪುಸ್ತಕವನ್ನು ಇಡಿಯಾಗಿ ಓದಬೇಕೆಂಬುದು ನಮ್ಮ ಉದ್ದೇಶ. ಮೇಲುನೋಟಕ್ಕೆ ಇದು ಎದುರಿಡುವುದು ಗೊತ್ತುಗುರಿ ಇಲ್ಲದೆ ದೃಶ್ಯವೀಕ್ಷಣೆ ಮಾಡುತ್ತ ಸಾಗುವ ಅಲೆತವನ್ನು; ಆದರೆ ಇದರ ಸಂಚಿತ ಫಲವಾಗಿ ಮಾನವ-ಐನ್‌ಸ್ಟೈನ್ ಬಗೆಗೆ ಇನ್ನೂ ಆಳವಾದ ಮತ್ತು ಶ್ರೀಮಂತವಾದ ಪರಿಚಯ ಲಭಿಸೀತೆಂಬುದು ನಮ್ಮ ಆಶಯ.

ನಡೆದು ಬಂದ ಹಾದಿಯನ್ನು ತಿಳಿಯಬೇಕು ಎನ್ನುವವರ ಸೌಕರ್ಯಕ್ಕಾಗಿ ಪುಸ್ತಕದ ಕೊನೆಯಲ್ಲಿ, ಸಂಕ್ಷೇಪವಾಗಿ ಐನ್‌ಸ್ಟೈನ್ ಕಾಲಸೂಚಿಯನ್ನು ಕೊಟ್ಟಿದ್ದೇವೆ.

ಐನ್‌ಸ್ಟೈನರ ಬಗೆಗಿನ ಒಂದು ಪುಸ್ತಕವನ್ನು ಏಕಕಾಲದಲ್ಲಿ ಮೂರು ವಿಧಿಗಳನ್ನು ಉಲ್ಲಂಘಿಸುವ ಒಂದು ಬಾಬಿನಿಂದ ತೊಡಗುವುದು ಅನುಚಿತವೇನೂ ಆಗದು : ಮೊದಲನೆಯದು, ಇದು ಐನ್‌ಸ್ಟೈನ್ ಉತ್ತರಿಸದಿದ್ದ ಒಂದು ಕಾಗದಕ್ಕೆ ಸಂಬಂಧಿಸಿದೆ ; ಎರಡನೆಯದು, ಈ ನಿರೂಪಣೆಯಲ್ಲಿ ಅಡಿಟಿಪ್ಪಣಿಗಳಿವೆ ; ಮತ್ತು ಮೂರನೆಯದು, ಖುದ್ದು ಇದೇ ಬಾಬನ್ನು ಈ ಮೊದಲೇ ಪ್ರಕಟಿಸಲಾಗಿದೆ.

ಐನ್‌ಸ್ಟೈನರ ಮೊದಲ ಜೀವನಚರಿತ್ರಕಾರರ ಪೈಕಿ ಒಬ್ಬರಾದ ಕಾರ್ಲ್ ಸೀಲಿಗ್ ೧೯೫೨ರ ಬೇಸಗೆಯಲ್ಲಿ ಇವರಿಗೊಂದು ಕಾಗದ ಬರೆದು ಇವರ ಪ್ರಥಮ ಗೌರವ ಡಾಕ್ಟೊರೇಟ್ ಪದವಿ ಬಗ್ಗೆ ವಿವರಗಳನ್ನು ಕೇಳಿದ್ದರು. ಇದಕ್ಕೆ ಉತ್ತರ ಬರೆಯುತ್ತ ಐನ್‌ಸ್ಟೈನ್ ೧೯೦೯ರಲ್ಲಿ ಸಂಭವಿಸಿದ ಘಟನೆಗಳನ್ನು ಪ್ರಸ್ತಾವಿಸಿದರು. ವಿಶೇಷ ಸಾಪೇಕ್ಷತಾ ಸಿದ್ಧಾಂತವನ್ನು ಇವರು ಅದೇ ನಾಲ್ಕುವರ್ಷಗಳಷ್ಟು ಹಿಂದೆ ಪ್ರತಿಪಾದಿಸಿದ್ದರೂ ಹೊಟ್ಟೆಹೊರೆಯಲು ಇನ್ನೂ ಬರ್ನಿನಲ್ಲಿಯ ಸ್ವಿಸ್ ಏಕಸ್ವ ಕಛೇರಿಯಲ್ಲಿ ದುಡಿಯುತ್ತಿದ್ದರು. ೧೯೦೯ರ ಬೇಸಗೆ. ಕ್ಯಾಲ್ವಿನ್ ಮಹಾಶಯ ಜಿನೀವಾ ವಿಶ್ವವಿದ್ಯಾಲಯವನ್ನು ಸಂಸ್ಥಾಪಿಸಿದುದರ ೩೫೦ನೆಯ ವಾರ್ಷಿಕೋತ್ಸವಾಚರಣೆಯ ಸಂದರ್ಭ. ಆಗ ಆ ವಿಶ್ವವಿದ್ಯಾಲಯ ನೂರಕ್ಕೂ ಮಿಕ್ಕಿ ಗೌರವ ಪದವಿಗಳನ್ನು ಪ್ರದಾನಿಸಿತು. ಐನ್‌ಸ್ಟೈನ್ ಹೀಗೆ ಬರೆದಿದ್ದಾರೆ :

● ಬರ್ನಿನಲ್ಲಿಯ ಏಕಸ್ವ ಕಛೇರಿಯಲ್ಲಿದ್ದ ನನಗೆ ಒಂದು ದಿನ ಹಿರಿ ಲಕೋಟೆಯೊಂದು ಬಂದಿತು. ಅದರೊಳಗಿಂದ ಒಂದು ಸಂಭಾವಿತ ಪತ್ರ ಹೊರಚಿಮ್ಮಿತು. ಅದರ ಮೇಲೆ ಚಿತ್ರಲಿಪಿಯಲ್ಲಿ (ಇದು ಲ್ಯಾಟಿನ್ನೆಂದೇ* ನನ್ನ ನಂಬಿಕೆ) ಏನೋ ಅಂಕಿತವಾಗಿತ್ತು. ಅದು ನನಗೆ ಸಂಬಂಧಿಸಿದ್ದಲ್ಲ ಮತ್ತು ಏನೂ ಕುತೂಹಲಕಾರಿ ಆದದ್ದಲ್ಲ ಎಂದು ಅನ್ನಿಸಿದ್ದರಿಂದ ಅವನ್ನು ನೇರ ಕಸದ ಬುಟ್ಟಿಗೆ ಎಸೆದೆ. ಮುಂದೆ ತಿಳಿಯಿತು ಅದು ಕ್ಯಾಲ್ವಿನ್ ಉತ್ಸವಗಳಿಗೆ ಬಂದ ಆಮಂತ್ರಣ ಮತ್ತು ನನಗೆ ಜಿನೀವಾ ವಿಶ್ವವಿದ್ಯಾಲಯ ಗೌರವ

---

* ವಾಸ್ತವವಾಗಿ ಅದು ಚಿತ್ರಲಿಪಿಯಲ್ಲಿ ಮುದ್ರಿಸಿದ್ದ ಫ್ರೆಂಚ್

ಡಾಕ್ಟೊರೇಟ್ ಪದವಿ ಪ್ರದಾನಿಸುವುದರ ಬಗೆಗಿನ ಪ್ರಕಟಣೆ ಎಂದು.* ವಿಶ್ವವಿದ್ಯಾಲಯದ ಅಧಿಕಾರಿಗಳು ನನ್ನ ಮೌನವನ್ನು ಸರಿಯಾಗಿ ಅರ್ಥವಿಸಿದ್ದರೆಂಬುದು ಸ್ಪಷ್ಟ. ಹೀಗಾಗಿ ಅವರು ನನ್ನ ಸ್ನೇಹಿತ ಮತ್ತು ವಿದ್ಯಾರ್ಥಿ ಲ್ಯೂಸಿಯನ್ ಚವಾನ್ ಎಂಬಾತನನ್ನು ಆಶ್ರಯಿಸಿದರು. ಜಿನೀವಾದವನಾದ ಈತ ಆಗ ಬರ್ನಿನಲ್ಲಿ ವಾಸಿಸುತ್ತಿದ್ದ. ವಸ್ತುತಃ ನಾನು ಜಿನೀವಾಕ್ಕೆ ತೆರಳುವುದು ಅನಿವಾರ್ಯವೆಂಬ ಕಾರಣವನ್ನು ಈತ ಮುಂದೊಡ್ಡಿ, ಆದರೆ ಇದನ್ನು ಇನ್ನಷ್ಟು ಬಿಡಿಸಿ ಹೇಳದೆ, ನನ್ನನ್ನು ಒಪ್ಪಿಸಿದ.

ಸರಿ, ನಿಶ್ಚಿತ ದಿನದಂದು ನಾನಲ್ಲಿಗೆ ಪಯಣಿಸಿದೆ. ನಾವು ತಂಗಿದ್ದ ಪ್ರವಾಸಿಧಾಮದ ಉಪಾಹಾರಮಂದಿರದಲ್ಲಿ ಅಂದು ಸಂಜೆ ನನಗೆ ಝೂರಿಕ್ಕಿನ ಕೆಲ ಮಂದಿ ಪ್ರಾಧ್ಯಾಪಕರ ಭೇಟಿ ಆಯಿತು. . . .ಅವರ ಪೈಕಿ ಪ್ರತಿಯೊಬ್ಬನೂ ಯಾವ ಘನ ಅರ್ಹತೆಯಿಂದಾಗಿ ತಾನಲ್ಲಿಗೆ ಆಗಮಿಸಿದ್ದೇನೆ ಎನ್ನುವುದನ್ನು ವಿಶದೀಕರಿಸಿದ. ನಾನು ಮೌನಿ ಆಗಿದ್ದೆ. ನನಗೂ ಪ್ರಶ್ನೆ ಎಸೆದರು. ಅದರ ಕಿಂಚಿತ್ತು ಸುಳುಹೂ ತಿಳಿಯದೆಂದು ಅರುಹಿದೆ. ಅಚ್ಚರಿ! ಇತರರಿಗೆ ಅದರ ಬಗ್ಗೆ ಎಲ್ಲವೂ ಗೊತ್ತಿತ್ತು! ಅವರು ಗುಟ್ಟು ರಟ್ಟು ಮಾಡಿದರು. ಮರುದಿನ ನಾನು ಸಾಲಂಕೃತ ವಿದ್ವನ್ಮಣಿಗಳ ಮಹಾ ಮೆರವಣಿಗೆಯಲ್ಲಿ ಮೆರೆಯಬೇಕಾಗಿತ್ತು. ಆದರೆ ನನ್ನಲ್ಲಿದ್ದುದು ಒಂದು ಸಾದಾ ಮಟ್ಟಾಳೆ[2] ಮತ್ತು ಮಾಮೂಲಿ ಉಡುಪು. ನಾನು ಮೆರವಣಿಗೆಯಿಂದ ಹೊರಗೆ ಉಳಿದಿರುವೆನೆಂಬ ನನ್ನ ಸೂಚನೆಯನ್ನು ಮರುಮಾತಿಗೆ ಇಂಬು ಇಲ್ಲದಂತೆ ತಳ್ಳಿಹಾಕಿದರು. ಇನ್ನು ಆ ಉತ್ಸವ ಸಮಾರಂಭಗಳು! ನನ್ನ ದೃಷ್ಟಿಯಿಂದ ನಗೆ ತರಿಸುವಂತಿದ್ದುವು.

ಇಡೀ ಬದುಕಿನಲ್ಲಿ ನಾನೆಂದೂ ಕಂಡರಿಯದಿದ್ದಂಥ ಪುಷ್ಕಳ ಗ್ರಾಸ ಭಕ್ಷಣೆಯೊಂದಿಗೆ ಸಮಾರಂಭ ಕೊನೆಗೊಂಡಿತು. ನನ್ನ ಪಕ್ಕದಲ್ಲಿ ಸುಖಾಸೀನನಾಗಿದ್ದ ಜಿನೀವಾದ ಒಬ್ಬ ಕುಲೀನನನ್ನು ಪ್ರಶ್ನಿಸಿದೆ "ಕ್ಯಾಲ್ವಿನ್[3] ಈಗಲೂ ಇಲ್ಲಿದ್ದಿದ್ದರೆ ಏನು ಮಾಡಿರುತ್ತಿದ್ದ ಗೊತ್ತೇ?" ಆತ ಗೋಣಾಡಿಸಿ ನನ್ನತ್ತ ಕೌತುಕಮಯ ದೃಷ್ಟಿಬೀರಿದ. ನಾನೆಂದೆ "ಈ ಹೇಯ ಬಕಾಸುರತ್ವಕ್ಕೆ ಶಿಕ್ಷೆಯಾಗಿ ಭೀಕರ ಚಿತೆಯನ್ನು ಭುಗಿಲೆಬ್ಬಿಸಿ ಅದರಲ್ಲಿ ನಮ್ಮೆಲ್ಲರನ್ನೂ ದಹಿಸಿ

---

* ಈ ಆಕರ್ಷಕ ದಾಖಲೆಯಲ್ಲಿ ಗಮನಾರ್ಹ ಮುದ್ರಣದೋಷವೊಂದು ನುಸುಳಿತ್ತು. ಇದು ಐನ್‌ಸ್ಟೈನರ ಸುಪ್ತಪ್ರಜ್ಞೆಯ ಮೇಲೆ ಅಚ್ಚೊತ್ತಿ ಅವರ ವರ್ತನೆಯನ್ನು ಪ್ರಭಾವಿಸಿರಬಹುದು; ಪದವಿ ಆದಾನಕಾರನ ಹೆಸರು Monsieur Einstein ಎಂಬುದರ ಬದಲಾಗಿ Monsieur Tinstein ಎಂದಿತ್ತು.

ಬಿಡುತ್ತಿದ್ದ." ಆ ವ್ಯಕ್ತಿ ಚಕಾರ ಉಸುರಲಿಲ್ಲ. ಇದರೊಂದಿಗೆ ಆ ಅವಿಸ್ಮರಣೀಯ ಸಮಾರಂಭದ ಬಗೆಗಿನ ನನ್ನ ನೆನಪು ಮಸುಳುತ್ತದೆ. ●

೧೯೩೬ ಕೊನೆಗೊಳ್ಳುವುದರಲ್ಲಿತ್ತು. ಬರ್ನ್ ಸೈಂಟಿಫಿಕ್ ಸೊಸೈಟಿ ಐನ್‌ಸ್ಟೈನರಿಗೆ ಆದಾಗತಾನೇ ಬಹುಮಾನಿಸಲಾಗಿದ್ದ ಪ್ರಶಸ್ತಿಪತ್ರವನ್ನು ಕಳಿಸಿಕೊಟ್ಟಿತು. ಜನವರಿ ೪ರಂದು ಇವರು ಪ್ರಿನ್‌ಸ್ಟನ್ನಿನಿಂದ ಮಾರೋಲೆ ಬರೆದರು :

● ಬರ್ನ್ ಸೈಂಟಿಫಿಕ್ ಸೊಸೈಟಿ ನನ್ನನ್ನು ಅಷ್ಟೊಂದು ಅಕ್ಕರೆಯಿಂದ ನೆನಸಿಕೊಂಡಿತೆಂಬುದು ನನಗೆಷ್ಟು ಮುದವಿತ್ತಿತು, ಮುದವಿತ್ತಿದೆ ಎಂಬುದನ್ನು ನೀವು ಊಹಿಸಲಾರಿರಿ. ಎಂದೋ ಮಾಯವಾಗಿಹೋದ ನನ್ನ ತಾರುಣ್ಯದ ದಿನಗಳಿಂದ ಹೊಮ್ಮಿಬಂದ ವಾಣಿಯೋ ಇದು ಎಂಬ ಭಾವ ಮೂಡಿತು. ಅಂದಿನ ಹಿತಕರವೂ ಉಲ್ಲಾಸದಾಯಕವೂ ಆದ ಸಂಜೆಗಳು ಮಗುದೊಮ್ಮೆ ನನ್ನ ಮನಕ್ಕೆ ಮರಳುತ್ತಿವೆ, ವಿಶೇಷವಾಗಿ, ಸೊಸೈಟಿಯಲ್ಲಿ ನಡೆಯುತ್ತಿದ್ದ ಉಪನ್ಯಾಸಗಳ ಬಗ್ಗೆ ಆಂತರಿಕ ಔಷಧಿ ಪ್ರಾಧ್ಯಾಪಕ ಸಾಹ್ಲಿಯವರು [ಸಾಲಿಸ್ ?] ಸಿಡಿಸುತ್ತಿದ್ದ ವಿಚಿತ್ರ ಚಟಾಕಿಗಳು. ಪ್ರಶಸ್ತಿಪತ್ರಕ್ಕೆ ಅಚ್ಚುಕಟ್ಟಾದ ಚೌಕಟ್ಟು ಕಟ್ಟಿಸಿದ್ದೇನೆ. ನನಗೆ ಲಭಿಸಿರುವ ಮಾನ್ಯತೆಯ ಇಂಥ ಎಲ್ಲ ಕುರುಹುಗಳ ಪೈಕಿ ಇದೊಂದೇ ನನ್ನ ಕೊಠಡಿಯಲ್ಲಿ ರಂಜಿಸುತ್ತಿರುವುದಾಗಿದೆ. ನಾನೂ ನನ್ನ ಸ್ನೇಹಿತರೂ ಬರ್ನಿನಲ್ಲಿದ್ದ ಕಾಲದ ಒಂದು ಸ್ಮಾರಕವಿದು.

ಸೊಸೈಟಿಯ ಸದಸ್ಯರಿಗೆ ನನ್ನ ಪ್ರೀತಿಪುರಸ್ಸರವಾದ ಧನ್ಯವಾದಗಳನ್ನು ಅರ್ಪಿಸಬೇಕೆಂದು ಕೋರುವುದರ ಜೊತೆಗೆ ಅವರು ನನ್ನ ಬಗೆಗೆ ಪ್ರದರ್ಶಿಸಿರುವ ಈ ಪ್ರೇಮವನ್ನು ತುಂಬ ಕೃತಜ್ಞತೆಯಿಂದ ಸ್ವೀಕರಿಸಿರುವೆನೆಂಬುದಾಗಿ ತಿಳಿಸಬೇಕೆಂದೂ ಆಶಿಸುತ್ತೇನೆ. ●

ವಿವರಣೆಯ ಒಂದು ಮಾತು ಅವಶ್ಯ : ಪ್ರಶಸ್ತಿಪತ್ರ ತಲಪಿದಾಗ ಐನ್‌ಸ್ಟೈನ್ ಹೇಳಿದರು "ನನ್ನನ್ನೂ ನನ್ನ ಭಾವನೆಗಳನ್ನೂ ಅವರು ಹೀಯಾಳಿಸುತ್ತಿದ್ದರು. ಆ ಕಾರಣದಿಂದಲೇ ಇದಕ್ಕೆ ಚೌಕಟ್ಟು ಹಾಕಿ ಗೋಡೆಯಲ್ಲಿ ತೂಗಹಾಕಬೇಕೆಂಬುದು ನನ್ನ ಇಚ್ಛೆ." ಇತರ ಪ್ರಶಸ್ತಿಗಳು ಇವರಿಗೆ ಬಹುಸಂಖ್ಯೆಯಲ್ಲಿ ಬಂದುವು ನಿಜ. ಆದರೆ ಅವುಗಳಿಗೆ ಚೌಕಟ್ಟು ಕಟ್ಟಿಸಿ ಗೋಡೆಗೆ ತಗಲಿಹಾಕಲಿಲ್ಲ; ಬದಲು "ಬಡಾಯಿ ಮೂಲೆ" [Protzenecke] ಎಂದು

ಇವರೇ ಹೆಸರಿಸಿದ್ದ ಒಂದು ಮೂಲೆಯಲ್ಲಿ ಅಡಗಿಸಿ ಇಟ್ಟಿದ್ದರು.

ಒಂದನೆಯ ಮಹಾಯುದ್ಧದ ನಡುವೆ, ೧೯೧೫ರಲ್ಲಿ, ಐನ್‌ಸ್ಟೈನ್ ತಮ್ಮ ಮೇರುಕೃತಿ ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತವನ್ನು ಬರ್ಲಿನ್ನಿನಲ್ಲಿ ಪೂರ್ತಿಗೊಳಿಸಿದರು. ಇದು ಅವರ ವಿಶೇಷ ಸಾಪೇಕ್ಷತಾಸಿದ್ಧಾಂತವನ್ನು ಸಾರ್ವತ್ರೀಕರಿಸಿತು, ಮಾತ್ರವಲ್ಲ, ಗುರುತ್ವದ ಬಗೆಗೆ ನೂತನ ಸಿದ್ಧಾಂತವನ್ನು ಪ್ರತಿಪಾದಿಸಿತು ಕೂಡ. ಇತರ ವಿಷಯಗಳ ಜೊತೆಗೆ ಇದು, ಬೆಳಕಿನ ಕಿರಣಗಳ ಗುರುತ್ವಾತ್ಮಕ ಬಗ್ಗುವಿಕೆಯನ್ನು ಕಣಿಸುಡಿಯಿತು. ಈ ವಿದ್ಯಮಾನವನ್ನು ೧೯೧೯ರ ಗ್ರಹಣದಲ್ಲಿ ಬ್ರಿಟಿಷ್ ವಿಜ್ಞಾನಿಗಳು, ವಿಶೇಷವಾಗಿ, ಆರ್ಥರ್ ಎಡಿಂಗ್ಟನ್ ಸ್ಥಿರೀಕರಿಸಿದರು. ಅಧಿಕೃತವಾಗಿ ಈ ಸ್ಥಿರೀಕರಣ ಘೋಷಿತವಾದಾಗ ಐನ್‌ಸ್ಟೈನರಿಗೆ ಬೈಗು ಬೆಳಗಾಗುವಷ್ಟರಲ್ಲಿ ಪ್ರಪಂಚಖ್ಯಾತಿ ಪ್ರಾಪ್ತವಾಯಿತು.[4] ಹೀಗೇಕಾಯಿತೆಂಬುದು ಇವರಿಗೆಂದೂ ಅರ್ಥವಾಗಲಿಲ್ಲ. ಝೂರಿಕ್ಕಿನಲ್ಲಿದ್ದ ಇವರ ಮಿತ್ರ ಹೈನ್ರಿಕ್ ಟ್ಸೇಂಗರ್ ಅವರಿಗೆ ಅದೇ ಕ್ರಿಸ್ಮಸಿನಲ್ಲಿ ಪತ್ರ ಬರೆಯುತ್ತ ಅದರ ಅಂಗವಾಗಿ ಹೀಗೆಂದರು :

● ಖ್ಯಾತಿಯೊಂದಿಗೆ ನಾನು ಹೆಚ್ಚು ಹೆಚ್ಚು ಮುಠ್ಠಾಳನಾಗುತ್ತಿದ್ದೇನೆ. ಇದೊಂದು ಸರ್ವಸಾಮಾನ್ಯವಾದ ಬೆಳವಣಿಗೆ ಎಂಬುದು ಕಂಡಂತೆಯೇ ಇದೆ. ಒಬ್ಬಾತ ಏನಾಗಿದ್ದಾನೆ ಮತ್ತು ಇತರರು ಆತ ಏನಾಗಿದ್ದಾನೆಂದು ಭಾವಿಸುತ್ತಾರೆ, ಅಥವಾ ಕನಿಷ್ಠ ಪಕ್ಷ ಭಾವಿಸುತ್ತಾರೆಂದು ಹೇಳುತ್ತಾರೆ—ಇವೆರಡರ ನಡುವಿನ ಅಗಳು ಬಹಳ ಅಗಲವಾದದ್ದು. ಆದರೆ ಇವನ್ನೆಲ್ಲ ಆತ ತಮಾಷೆಯೆಂದು ಸ್ವೀಕರಿಸಬೇಕಾಗುತ್ತದೆ. ●

ಐನ್‌ಸ್ಟೈನರ ಖ್ಯಾತಿ ಅವ್ಯಾಹತವಾಗಿ ವರ್ಧಿಸಿತು. ಇವರಿಗೆ ಬರುತ್ತಿದ್ದ ಟಪ್ಪಾಲು ಅದ್ಭುತ ವೈವಿಧ್ಯಪೂರ್ಣವಾಗಿತ್ತು. ಉದಾಹರಣೆಗೆ ವಾಷಿಂಗ್ಟನ್ ಡಿ.ಸಿ.ಯಲ್ಲಿದ್ದ ವಿದ್ಯಾರ್ಥಿನಿಯೊಬ್ಬಳು ೧೯೪೩ ಜನವರಿ ೩ರಂದು ಇವರಿಗೆ ಕಾಗದ ಬರೆದು ತಾನು ಗಣಿತದಲ್ಲಿ ತರಗತಿಯ ಸರಾಸರಿಗಿಂತ ಕೆಳಗಿರುವುದಾಗಿಯೂ ಹೀಗಾಗಿ ತನ್ನ ಗೆಳತಿಯರಿಗಿಂತ ಅಧಿಕ ಶ್ರಮವಹಿಸಿ ಅಭ್ಯಸಿಸಬೇಕಾಗಿರುವುದಾಗಿಯೂ ಕಷ್ಟತೋಡಿಕೊಂಡಿದ್ದಳು.

೧೯೪೩ ಜನವರಿ ೭ರಂದು ಐನ್‌ಸ್ಟೈನ್ ಪ್ರಿನ್ಸ್‌ಟನ್ನಿನಿಂದ ಇಂಗ್ಲಿಷಿನಲ್ಲಿ ಮಾರೋಲೆ ಬರೆಯುತ್ತ ಭಾಗಶಃ ಹೀಗೆಂದರು :

● ಗಣಿತದ ಬಗೆಗಿನ ನಿನ್ನ ತಾಪತ್ರಯಗಳನ್ನು ಹೆಚ್ಚಿಗೆ ಹಚ್ಚಿಕೊಳ್ಳ ಬೇಡ ; ನನ್ನವು ಇನ್ನೂ ಕಡುತರವಾಗಿವೆಯೆಂದು ನಿನಗೆ ಭರವಸೆ ನೀಡ ಬಲ್ಲೆ. ●

೧೮೯೫ರಷ್ಟು ಹಿಂದೆ, ಒಂದು ವರ್ಷಕಾಲ ಶಾಲೆಗೆ ಶರಣುಹೊಡೆದಿದ್ದ ಯುವಕ ಐನ್‌ಸ್ಟೈನ್, ಆರೌನಲ್ಲಿದ್ದ ಆರ್ಗೌನ ಸ್ವಿಸ್ ಕ್ಯಾಂಟೊನಲ್[4] ಶಾಲೆಗೆ ವಿದ್ಯಾರ್ಥಿಯಾಗಿ ದಾಖಲಾದರು. ೧೮೯೬ ನವೆಂಬರ್ ೭ರಂದು ಆರ್ಗೌ ಅಧಿಕಾರಿಗಳಿಗೆ ಈ ಮುಂದಿನ ಸ್ವವಿಚಾರ ಟಿಪ್ಪಣಿ ಕಳಿಸಿದರು :

● ೧೮೭೯ ಮಾರ್ಚ್ ೧೪ರಂದು ಉಲ್ಮ್‌ನಲ್ಲಿ ಹುಟ್ಟಿದೆ. ವಯಸ್ಸು ಒಂದು ವರ್ಷ ತುಂಬಿದಾಗ ಮ್ಯೂನಿಕ್ಕಿಗೆ ಬಂದು ಅಲ್ಲಿ ೧೮೯೪–೯೫ರ ಚಳಿಗಾಲದ ತನಕ ಇದ್ದೆ. ಅಲ್ಲಿಯೇ ಪ್ರಾಥಮಿಕಶಾಲೆಗೂ ಲ್ಯೂಯಿಟ್‌ಪೋಲ್ಡ್ ಮಾಧ್ಯಮಿಕ ಶಾಲೆಗೂ—ಅಂದರೆ ಏಳನೆಯ ತರಗತಿವರೆಗೆ, ಆದರೆ ಈ ತರಗತಿಗೆ ಅಲ್ಲ—ಹಾಜರಿಹಾಕಿದೆ. ತರುವಾಯ ಕಳೆದ ವರ್ಷದ ಶರತ್ಕಾಲದ ತನಕ ಮಿಲಾನಿನಲ್ಲಿ ಉಳಿದಿದ್ದು ಸ್ವಂತ ವ್ಯಾಸಂಗ ಮುಂದುವರಿಸಿದೆ. ಕಳೆದ ಶರತ್ಕಾಲದಿಂದ ಆರೌನಲ್ಲಿಯ ಕ್ಯಾಂಟೊನಲ್ ಶಾಲೆಗೆ ಹೋಗುತ್ತಿದ್ದೇನೆ. ಈಗ ನಾನು ಸ್ವತಂತ್ರವಾಗಿ ಪದವಿ ಪರೀಕ್ಷೆಗೆ ಕೂರಬೇಕೆಂದಿದ್ದೇನೆ. ಮುಂದೆ ಫೆಡರಲ್ ಪಾಲಿಟೆಕ್ನಿಕ್ ಇನ್‌ಸ್ಟಿಟ್ಯೂಟಿನ ಆರನೆಯ ಇಯತ್ತೆಯಲ್ಲಿ ಗಣಿತವನ್ನೂ ಭೌತವಿಜ್ಞಾನವನ್ನೂ ಅಧ್ಯಯನ ಮಾಡಬೇಕೆಂದು ಯೋಜಿಸಿದ್ದೇನೆ. ●

ಹಲವಾರು ವರ್ಷಗಳ ತರುವಾಯ, ಆಗ ಸುವಿಖ್ಯಾತರಾಗಿದ್ದ ಐನ್‌ಸ್ಟೈನರಿಗೆ ಇನ್ನೊಂದು ಸ್ವವಿಚಾರ ಟಿಪ್ಪಣಿ ತಯಾರಿಸುವ ಅವಕಾಶ ಒದಗಿಬಂದಿತು. ಅದರಲ್ಲಿ ಕೆಲವು ಕುತೂಹಲಕಾರಿ ಸಂಗತಿಗಳಿವೆ.

ಹ್ಯಾಲೆ ಪಟ್ಟಣದಲ್ಲಿ ೧೬೫೨ರಲ್ಲಿ ಸಂಸ್ಥಾಪಿಸಲಾದ ಕೈಸರ್ ಲಿಯೊಪೊಲ್ಡ್ ಜರ್ಮನ್ ಅಕಾಡೆಮಿ ಆಫ್ ಸೈಂಟಿಸ್ಟ್ಸ್[6] ಇದೆ. ಒಂದು ಕಾಲದಲ್ಲಿ ಗ್ಯೊಥೇ[5] ಇದರ ಸದಸ್ಯನಾಗಿದ್ದ. ಗ್ಯೊಥೇ ಮರಣಶತಾಬ್ದಿ ಸ್ಮರಣಾರ್ಥ ಈ ಅಕಾಡೆಮಿಗೆ ಐನ್‌ಸ್ಟೈನರನ್ನು ಸದಸ್ಯರಾಗಿ ಬರಲು ಆಹ್ವಾನಿಸಬೇಕೆಂದು ಅದು ೧೯೩೨ ಮಾರ್ಚ್ ೧೭ರಂದು ನಿರ್ಣಯಿಸಿತು. ಈ ಆಹ್ವಾನವನ್ನು ಐನ್‌ಸ್ಟೈನ್ ಮನ್ನಿಸಿದಾಗ ಅಕಾಡೆಮಿಯ ಅಧ್ಯಕ್ಷ, ಪ್ರಾಚೀನ

ಸಂಪ್ರದಾಯಾನುಸಾರ, ಇವರಿಗೊಂದು ಜೀವನವೃತ್ತಾಂತ ಪ್ರಶ್ನಾವಳಿಯನ್ನು ಕಳಿಸಿಕೊಟ್ಟ. ಅದರಲ್ಲಿ ಒಂಬತ್ತು ಮೂಲಪ್ರಶ್ನೆಗಳಿದ್ದುವು. ಉತ್ತರ ಬರೆಯಲು ಮೀಸಲಿಟ್ಟ ಎಡೆ ಕಡಿಮೆ ಇದ್ದುದರಿಂದ ಐನ್‌ಸ್ಟೈನ್ ಒಂದು ತೆರನಾದ ತಂತಿಭಾಷೆ ಧಾಟಿಯನ್ನು ಅನುಸರಿಸಿದರು.

ನಾಟ್ಸಿಗಳು ಅಧಿಕಾರಸ್ಥಾನಗಳನ್ನು ಇನ್ನೂ ಆಕ್ರಮಿಸಿರಲಿಲ್ಲ. ಆದರೆ ಅವರ ಯಹೂದ್ಯವಿರೋಧೀ ಪ್ರಚಾರ ಮಾತ್ರ ತಾರಸ್ಥಾಯಿಯಲ್ಲಿ ನಡೆದಿತ್ತು. ಎಂದೇ ಮೊದಲ ಪ್ರಶ್ನೆಗೆ ಐನ್‌ಸ್ಟೈನರ ಅನುಕ್ರಿಯೆ ಕುತೂಹಲಕಾರಿಯಾಗಿದೆ (ದಪ್ಪ ಅಕ್ಷರಗಳಲ್ಲಿ ಕಾಣಿಸಿದೆ):

● 1. **ಯೆಹೂದ್ಯ ತಂದೆತಾಯಿಯರ ಮಗನಾಗಿ** ೧೮೭೯ ಮಾರ್ಚ್ ೧೪ರಂದು ಉಲ್ಮ್‌ನಲ್ಲಿ ಜನನ. ತಂದೆ ಒಬ್ಬ ವಣಿಕ. ನಾನು ಹುಟ್ಟಿದ ಕೆಲವೇ ತಿಂಗಳುಗಳಲ್ಲಿ ನನ್ನ ತಂದೆ ಮ್ಯೂನಿಕ್ಕಿಗೂ ಮುಂದೆ ೧೮೯೪ರಲ್ಲಿ ಇಟಲಿಗೂ ಹೋಗಿ ಕೊನೆ ಉಸಿರಿನ ತನಕ (೧೯೦೨) ಅಲ್ಲಿಯೇ ನೆಲಸಿದ್ದರು. ನನಗೆ ಸಹೋದರ ಇಲ್ಲ; ತಂಗಿ ಇದ್ದಾಳೆ, ಇಟಲಿಯಲ್ಲಿ. ●

ಎರಡನೆಯ ಮತ್ತು ಮೂರನೆಯ ಪ್ರಶ್ನೆಗಳು ಇವರ ಬಾಲ್ಯ ಹಾಗೂ ಶಿಕ್ಷಣ ವಿವರಗಳನ್ನು ಕುರಿತವು. ಪೂರ್ಣನಿಷ್ಠೆಯಿಂದ ಇವುಗಳಿಗೆ ಉತ್ತರ ಬರೆದರು. ನಾಲ್ಕನೆಯ ಪ್ರಶ್ನೆ ಇವರ ವೃತ್ತಿಗೆ ಸಂಬಂಧಿಸಿದ್ದು. ಇದಕ್ಕೆ ಉತ್ತರ:

● IV. ೧೯೦೦ರಿಂದ ೧೯೦೨ರ ತನಕ ಸ್ವಿಟ್ಸರ್ಲೆಂಡಿನಲ್ಲಿದ್ದೆ, ಖಾಸಗಿ ಶಿಕ್ಷಕನಾಗಿ, ಒಂದಷ್ಟು ಕಾಲ ಮನೆ ಮೇಷ್ಟ್ರಾಗಿ ಕೂಡ. ಸ್ವಿಸ್ ಪೌರತ್ವ ಗಳಿಸಿದೆ. ೧೯೦೨–೦೯ ಫೆಡರಲ್ ಪೇಟೆಂಟ್ ಆಫೀಸಿನಲ್ಲಿ ತಜ್ಞ (ಪರೀಕ್ಷಕ) ನಾಗಿಯೂ ನೇಮನಗೊಂಡಿದ್ದೆ. ೧೯೧೧–೧೨ ಪ್ರಾಗ್ ವಿಶ್ವವಿದ್ಯಾಲಯದಲ್ಲಿ ಸೈದ್ಧಾಂತಿಕ ಭೌತವಿಜ್ಞಾನದ ಪ್ರಾಧ್ಯಾಪಕ. ೧೯೧೨–೧೪ ಝೂರಿಕ್ಕಿನ ಫೆಡರಲ್ ಪಾಲಿಟೆಕ್ನಿಕ್ ಇನ್‌ಸ್ಟಿಟ್ಯೂಟಿನಲ್ಲೂ ಅದೇ ಕೆಲಸ. ೧೯೧೪ರಿಂದ ಈಚೆಗೆ ಬರ್ಲಿನ್ನಿನ ಪ್ರಶ್ಯನ್ ಅಕ್ಯಾಡಮಿ ಆಫ್ ಸೈನ್ಸಸ್ಸಿನಲ್ಲಿ ವೇತನ ಪಡೆಯುತ್ತಿರುವ ಒಬ್ಬ ಸದಸ್ಯನಾಗಿದ್ದೇನೆ. ಇಲ್ಲಿ ನಾನು ವೈಜ್ಞಾನಿಕ ಸಂಶೋಧನಕಾರ್ಯಕ್ಕೆ ಪೂರ್ತಿಯಾಗಿ ನನ್ನನ್ನು ನಿವೇದಿಸಿಕೊಳ್ಳಬಹುದಾಗಿದೆ. ●

ಐದನೆಯ ಪ್ರಶ್ನೆ ಇವರ ಸಾಧನೆಗಳ ಹಾಗೂ ಪ್ರಕಟಣೆಗಳ ಬಗ್ಗೆ ಇತ್ತು. ಉತ್ತರದಲ್ಲಿ ಇವರು ನಮೂದಿಸಿರುವ ಕೆಲವು ತಾರೀಕುಗಳು ಗೊಂದಲ ಉಂಟುಮಾಡುತ್ತಿವೆ. ಉದಾಹರಣೆಗೆ ವಿಶೇಷ ಸಾಪೇಕ್ಷತಾಸಿದ್ಧಾಂತ ಖಾತ್ರಿ

೧೯೦೫ಕ್ಕೆ ಸೇರಿದ್ದೇ ಹೊರತು ೧೯೦೬ಕ್ಕಲ್ಲ. ಐನ್‌ಸ್ಟೈನ್ ನೆನಪಿನಿಂದ ಜವಾಬನ್ನು ಬರೆದಿರಬಹುದು. ಆದರೆ ನೆನಪು ಇವರಿಗೆ ಕೈಕೊಟ್ಟಿತ್ತು. ಇವರು ಬರೆದುದಿಷ್ಟು :

● V. ನನ್ನ ಪ್ರಕಟಣೆಗಳು ಬಹುತೇಕ ಎಲ್ಲವೂ ಭೌತವಿಜ್ಞಾನವನ್ನು ಕುರಿತ ಸಂಕ್ಷೇಪ ಪ್ರಬಂಧಗಳಿಗೆ ಮೀಸಲಾಗಿವೆ. ಅವುಗಳ ಪೈಕಿ ಹೆಚ್ಚಿನವು *Annalen der Physik*[6]ನಲ್ಲಿಯೂ *Proceedings of the Prussian Academy af Sciences*[7]ನಲ್ಲಿಯೂ ಪ್ರಕಟವಾಗಿವೆ. ಅತ್ಯಂತ ಪ್ರಮುಖ ವಾದವು ಈ ಮುಂದಿನ ವಿಷಯುಗಳ ಮೇಲಿನವು :

ಬ್ರೌನಿಯನ್ ಚಲನೆ (೧೯೦೫)
ಪ್ಲ್ಯಾಂಕರ ಸೂತ್ರ ಮತ್ತು ದ್ಯುತಿಶಕಲಗಳ ಸಿದ್ಧಾಂತ
(೧೯೦೫, ೧೯೧೭)
ವಿಶೇಷ ಸಾಪೇಕ್ಷತೆ ಮತ್ತು ಶಕ್ತಿಯ ರಾಶಿ (೧೯೦೬)
ಸಾರ್ವತ್ರಿಕ ಸಾಪೇಕ್ಷತೆ ೧೯೧೬, ಮತ್ತು ತದನಂತರ.

ಜೊತೆಗೆ ಶಾಖದ ಏರಿಳಿತಗಳನ್ನು ಕುರಿತು, ಅಂತೆಯೇ [೧೯೩೧ರಲ್ಲಿ] ಪ್ರೊಫೆಸರ್ ಡಬ್ಲ್ಯು. ಮೇಯರ್ ಅವರ ಸಹಯೋಗದಲ್ಲಿ ಗುರುತ್ವ ಹಾಗೂ ವಿದ್ಯುತ್ತಿನ ಏಕೀಕೃತ ಸ್ವಭಾವವನ್ನು ಕುರಿತು ಬರೆದ ಪ್ರಬಂಧ ಗಳನ್ನೂ ಹೆಸರಿಸಬೇಕು. ●

ಆರನೆಯ ಪ್ರಶ್ನೆಯಲ್ಲಿ ವೈಜ್ಞಾನಿಕ ಪ್ರವಾಸಗಳ ಬಗ್ಗೆ ಕೇಳಲಾಗಿತ್ತು. ಇದಕ್ಕೆ ಅವರು ನೀಡಿದ ಉತ್ತರವಿದು :

● VI. ಫ್ರಾನ್ಸ್, ಜಪಾನ್, ಆರ್ಜೆಂಟೀನ, ಇಂಗ್ಲೆಂಡ್ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ ಆಗೀಗ ಭಾಷಣಪ್ರವಾಸಗಳು. ಇವು ಗಳ ಪೈಕಿ ಪ್ಯಾಸಡೀನ ಎಂಬಲ್ಲಿಗೆ ಮಾಡಿದ ಪ್ರವಾಸದ ಹೊರತಾಗಿ ಉಳಿದ ಯಾವುವೂ ಸಂಶೋಧನೋದ್ದೇಶಗಳನ್ನು ಈಡೇರಿಸಲಿಲ್ಲ. ●

ಏಳನೆಯ ಪ್ರಶ್ನೆಯಲ್ಲಿ ಅವರ ಪರಿಶೋಧನೆಯ ಗಮ್ಯಗಳೇನೆಂದು ಕೇಳ ಲಾಗಿತ್ತು. ಇದಕ್ಕೆ ಅವರು ಬರೆದ ಉತ್ತರ :

● VII. ಸೈದ್ಧಾಂತಿಕ ಭೌತವಿಜ್ಞಾನದ ವ್ಯವಸ್ಥೆಯ ಸರಳೀಕರಣ ಮತ್ತು ಏಕೀಕರಣ ಸದಾ ನನ್ನ ಸಂಶೋಧನೆಯ ನಿಜವಾದ ಗಮ್ಯ. ಬೃಹದ್ವಿದ್ಯಮಾನಗಳನ್ನು ಕುರಿತಂತೆ ನಾನು ಈ ಗಮ್ಯವನ್ನು ತೃಪ್ತಿಕರ ವಾಗಿ ತಲಪಿದೆ. ಆದರೆ ಶಕಲಗಳ ಮತ್ತು ಪರಮಾಣವಿಕ ರಚನೆಯ ವಿದ್ಯ ಮಾನಗಳನ್ನು ಕುರಿತಂತೆ ಅಲ್ಲ. ಆಧುನಿಕ ಶಕಲ ಸಿದ್ಧಾಂತಕ್ಕೆ ಗಮನಾರ್ಹ

ಯಶಸ್ಸು ಸಿದ್ಧಿಸಿದೆ ನಿಜ. ಆದರೆ ಅದು ಕೂಡ ಈ ಎರಡನೆಯ ಸಮಸ್ಯಾ ಸಮುಚ್ಚಯದ ತೃಪ್ತಿಕರ ಪರಿಹಾರದಿಂದ ಇನ್ನೂ ಬಲು ದೂರದಲ್ಲಿದೆ ಎಂದು ಭಾವಿಸಿದ್ದೇನೆ.

ಅವರಿಗೆ ಲಭಿಸಿದ ಗೌರವಗಳೇನೆಂಬುದನ್ನು ಎಂಟನೆಯ ಪ್ರಶ್ನೆಯಲ್ಲಿ ಕೇಳಲಾಗಿತ್ತು. ಈ ಮುಂದಿನಂತೆ ಉತ್ತರ ಬರೆದರು :

VIII. ನಾನು ಅನೇಕಾನೇಕ ವೈಜ್ಞಾನಿಕ ಸಂಘಗಳ ಸದಸ್ಯನಾಗಿದ್ದೇನೆ. ಹಲವಾರು ಪದಕಗಳು ನನಗೆ ಬಹುಮಾನಗಳಾಗಿ ದೊರೆತಿವೆ. ಲಂಡನ್ ವಿಶ್ವವಿದ್ಯಾಲಯದ ಜೊತೆ ಒಂದು ತೆರನಾದ ಸಂದರ್ಶಕ ಪ್ರಾಧ್ಯಾಪಕತ್ವ ಸಂಬಂಧವನ್ನೂ ಹೊಂದಿದ್ದೇನೆ. ಇದೇ ಬಗೆಯ ಸಂಬಂಧ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ (ಕ್ರೈಸ್ಟ್ ಚರ್ಚ್ ಕಾಲೇಜ್) ಜೊತೆಗೂ ಇದೆ.

ಐನ್‌ಸ್ಟೈನ್ ೧೯೨೧ರಲ್ಲಿ ಪಡೆದ ಭೌತವಿಜ್ಞಾನ ವಿಭಾಗದ ನೊಬೆಲ್ ಪಾರಿತೋಷಿಕದ ಬಗೆಗೆ ಉಲ್ಲೇಖವಿಲ್ಲದಿರುವುದು ಇಲ್ಲಿಯ ಅತ್ಯಾಶ್ಚರ್ಯಕರ ಸಂಗತಿ. ಖಂಡಿತವಾಗಿಯೂ ಜ್ಞಾಪಕಶಕ್ತಿಯ ವೈಫಲ್ಯವಿದೆಂದು ಹೇಳಬರುವಂತಿಲ್ಲ.

ಕೊನೆಯ ಪ್ರಶ್ನೆ ಪೂರ್ತಿ ಕಿಪ್ಪರಲಾಗ ಹೊಡೆದಿತ್ತು : ಅವರ 'ನಿಸ್ಪೃಷ್ಟ' ವಿಳಾಸವೇನೆಂದು ಅದರಲ್ಲಿ ಕೇಳಲಾಗಿತ್ತು.

ಆರೌ ಶಾಲೆಯಲ್ಲಿ ಐನ್‌ಸ್ಟೈನ್ ಫ್ರೆಂಚ್ ಕಲಿತರು. ಆ ಭಾಷೆಯಲ್ಲಿ ಇವರು 'ಅಭ್ಯಾಸ'ವಾಗಿ ಬರೆದ (ಮತ್ತು ಫ್ರೆಂಚ್ ಅಧ್ಯಾಪಕನಿಂದ ತಿದ್ದಲ್ಪಟ್ಟ) ಒಂದು ಪ್ರಬಂಧದ ಹೆಚ್ಚು ಕಡಿಮೆ ಅಕ್ಷರಶಃ ಅನುವಾದವನ್ನು ಇಲ್ಲಿ ಕೊಟ್ಟಿದೆ. ಆಗ ಇವರ ಪ್ರಾಯ ಸುಮಾರು ಹದಿನಾರು ವರ್ಷ. ಪ್ರಬಂಧದ ಶೀರ್ಷಿಕೆಯನ್ನು ಗಮನಿಸುವಾಗ ಪ್ರಾಯಶಃ ಅಧ್ಯಾಪಕನೇ ಇದನ್ನು ಇಡೀ ತರಗತಿಗೆ ಸೂಚಿಸಿರಬೇಕೆಂದು ತೋರುತ್ತದೆ :

### ಭವಿಷ್ಯದ ಬಗೆಗೆ ನನ್ನ ಯೋಜನೆಗಳು

ಸುಖಿಯಾದ ಒಬ್ಬ ವ್ಯಕ್ತಿ ವರ್ತಮಾನಕಾಲದ ಬಗೆಗೆ ಅದೆಷ್ಟು ಸಂತುಷ್ಟನಾಗಿರುವನೆಂದರೆ ಅವನೆಂದೂ ಭವಿಷ್ಯವನ್ನು ಕುರಿತು ಹೆಚ್ಚಿನ ಚಿಂತೆಯನ್ನೇ ಹಚ್ಚಿಕೊಳ್ಳುವುದಿಲ್ಲ. ತರುಣರಾದರೋ ದಿಟ್ಟ ಯೋಜನೆಗಳ ಬೆಂಬತ್ತಿ ಸಾಗುವುದೇ ಸದಾ ಅವರ ಪ್ರವೃತ್ತಿ. ತನ್ನ ಆಸೆ ಆಕಾಂಕ್ಷೆಗಳ

ಲಕ್ಷ್ಯವೇನು ಎಂಬುದರ ಬಗೆಗೆ ಸಾಧ್ಯವಾಗುವಷ್ಟು ನಿಸ್ಪೃಷ್ಟ ಚಿತ್ರವನ್ನು ರೂಪಿಸಿಕೊಳ್ಳಬೇಕಾದದ್ದು ನಿಷ್ಠಾವಂತ ತರುಣನಿಗೆ ಸಹಜವಾದದ್ದೂ ರ ಹೌದು.

ಪರೀಕ್ಷೆಗಳನ್ನು ಜಯಪ್ರದವಾಗಿ ಅಡ್ಡಹಾಯುವ ಸೌಭಾಗ್ಯ ನನ್ನ ದಾದರೆ ಆಗ ನಾನು ಝೂರಿಕ್ಕಿನ ಫೆಡರಲ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಗೆ ದಾಖಲಾಗುತ್ತೇನೆ. ಅಲ್ಲಿ ನಾಲ್ಕು ವರ್ಷಗಳ ಕಾಲ ತಂಗಿದ್ದು ಗಣಿತವನ್ನೂ ಭೌತವಿಜ್ಞಾನವನ್ನೂ ವ್ಯಾಸಂಗಿಸುತ್ತೇನೆ. ನೈಸರ್ಗಿಕ ವಿಜ್ಞಾನಗಳ ಈ ವಿಭಾಗದಲ್ಲಿ, ಇವುಗಳ ಸೈದ್ಧಾಂತಿಕ ಶಾಖೆಗಳನ್ನು ಆಯ್ದು ಕೊಂಡು, ಪ್ರಾಧ್ಯಾಪಕನಾಗುವ ಆಸೆ ಇಟ್ಟುಕೊಂಡಿದ್ದೇನೆ.

ನಾನು ಈ ಯೋಜನೆಯನ್ನು ಆಯಲು ಕಾರಣಗಳಿವು. ಎಲ್ಲಕ್ಕಿಂತ ಮುಖ್ಯವಾದದ್ದೆಂದರೆ ಅಮೂರ್ತ ಮತ್ತು ಗಣಿತೀಯ ಚಿಂತನೆಯತ್ತ ನನಗಿರುವ ವೈಯಕ್ತಿಕ ಒಲವು, ಮತ್ತು ಕಲ್ಪನಾವಿಹಾರ ಹಾಗೂ ಪ್ರಾಯೋಗಿಕ ಕೌಶಲ ಇವುಗಳ ಅಭಾವ. ಇನ್ನು ನನ್ನ ಅಪೇಕ್ಷೆಗಳೂ ಇವೆ. ಅವಾದರೂ ನನ್ನಲ್ಲಿ ಇದೇ ನಿರ್ಧಾರವನ್ನು ಪ್ರೇರಿಸಿವೆ. ಇದು ತೀರ ಸಹಜ ವಾದದ್ದು. ಒಬ್ಬಾತನ ಒಲವು ಸದಾ ಇರುವುದು. ಆತ ಕುಶಲತೆಯಿಂದ ನಿರ್ವಹಿಸಬಲ್ಲ ಕಾರ್ಯಗಳನ್ನು ಮಾಡುವುದರತ್ತ. ಅಲ್ಲದೇ ವೈಜ್ಞಾನಿಕ ವೃತ್ತಿಯಲ್ಲಿ ಒಂದು ವಿಧದ ಸ್ವಾತಂತ್ರ್ಯವಿದೆ. ಇದು ನನಗೆ ಅತಿ ಪ್ರಿಯ ವಾದದ್ದು. ●

ಇತರರು ಬಹುತೇಕ ಅತ್ಯಮೂಲ್ಯವಾದವು, ಮತ್ತು ನಿಜಕ್ಕೂ ಅತ್ಯಗತ್ಯ ವಾದವು ಎಂದು ಭಾವಿಸುವ ಲೌಕಿಕ ಪರಿಕರಗಳ ಬಗ್ಗೆ ಹೇಗೆ ಐನ್‌ಸ್ಟೈನ್ ನಿರಾಸಕ್ತರಾಗಿದ್ದರೆಂಬ ಸಂಗತಿಯನ್ನು ಅವರ ತಂಗಿ ಮಾಜಾ, ಸಂಕ್ಷಿಪ್ತ ಮತ್ತು ಅಪ್ರಕಟಿತ ಜೀವನಚಾರಿತ್ರಿಕ ಪ್ರಬಂಧವೊಂದರಲ್ಲಿ, ಇತರ ವಿಷಯ ಗಳ ಜೊತೆಗೆ, ಪ್ರಸ್ತಾವಿಸಿದ್ದಾರೆ. ಈಕೆ ಬರೆದಿದ್ದಾರೆ, ಉದಾಹರಣೆಗೆ: "ಯೌವನದ ದಿನಗಳಂದು ಅವರು ಆಗಾಗ ಹೇಳುವುದಿತ್ತು 'ನನ್ನ ಊಟದ ಕೊಠಡಿಯಲ್ಲಿ ನನಗೆ ಬೇಕಾಗುವ ವಸ್ತುಗಳೆಂದರೆ ಪೈನ್ ಮರದ ಒಂದು ಮೇಜು, ಒಂದು ಬೆಂಚು ಮತ್ತು ಕೆಲವು ಕುರ್ಚಿಗಳು."

ಐನ್‌ಸ್ಟೈನ್ ಝೂರಿಕ್ಕಿನಲ್ಲಿ ವಿದ್ಯಾರ್ಥಿ ಆಗಿದ್ದಾಗ ತಮ್ಮ ತಂಗಿಗೆ ಬರೆದ ಒಂದು ಕಾಗದದಿಂದ (೧೮೯೮) ಆಯ್ದ ಒಂದು ಉದ್ಧರಣೆಯನ್ನು ಇಲ್ಲಿ ಕೊಟ್ಟಿದೆ (ತಮ್ಮ ಕಾಗದದಲ್ಲಿ ಇವರು ಆಕೆಯನ್ನು "ಪ್ರಿಯ ಸೋದರಿ" ಎಂಬುದಾಗಿ ಸಂಬೋಧಿಸುತ್ತಿದ್ದರು—ತರುವಾಯದ ದಿನಗಳಲ್ಲಿ ಬೆಲ್ಜಿಯಮ್ಮಿನ ರಾಣಿ ಎಲಿಝಬೆತ್ ಅವರನ್ನು "ಪ್ರಿಯ ರಾಣಿ" ಎಂಬುದಾಗಿ ಸಂಬೋಧಿಸುತ್ತಿದ್ದಂತೆ):

● ನನ್ನ ಬಡ ತಂದೆತಾಯಿಯರ[ಆರ್ಥಿಕ] ದುರವಸ್ಥೆ ನನ್ನನ್ನು ಕಡು ವಾಗಿ ಪೀಡಿಸುತ್ತಿದೆ. ಅಲ್ಲದೆ, ಪ್ರಾಯಕ್ಕೆ ಬಂದಿರುವ ನಾನು ಅವರಿಗೆ ಯಾವುದೇ ತೆರನಾದ ನೆರವನ್ನೂ ನೀಡಲಾಗದೆ, ನಿಷ್ಕ್ರಿಯಾವಂತನಾಗಿ ನಿಂತಿರುವಂತಾಯಿತಲ್ಲ ಎಂಬುದು ನನ್ನನ್ನು ಇನ್ನಷ್ಟು ಕಟುವಾಗಿ ಕುಟುಕುತ್ತಿದೆ. ನಾನು ನಮ್ಮ ಕುಟುಂಬಕ್ಕೆ ಹೊರೆ ಮಾತ್ರ, ಬೇರೇನೂ ಅಲ್ಲ.... ನಿಜಕ್ಕೂ ನಾನು ಹುಟ್ಟದೇ ಇದ್ದಿದ್ದರೆ ಚೆನ್ನಾಗಿತ್ತೋ ಏನೋ. ಕೆಲವೇಳೆ ನನಗೆ ನೆಮ್ಮದಿ ನೀಡುವ ಒಂದೇ ಒಂದು ಆಸರೆ ಎಂದರೆ ನಾನು ಯಾವಾಗಲೂ ನನ್ನ ಅಲ್ಪ ಸಾಮರ್ಥ್ಯದ ಪರಿಮಿತಿಯಲ್ಲಿ ಸಾಧ್ಯವಾದದ್ದೆಲ್ಲವನ್ನೂ ಮಾಡಿದ್ದೇನೆ, ಮತ್ತು ನನ್ನ ಅಧ್ಯಯನಗಳು ನನಗೆ ಒದಗಿಸಬಲ್ಲ ವಿನೋದಗಳ ಹಾಗೂ ವಿಹಾರಗಳ ವಿನಾ ಬೇರೆ ಯಾವುದರಲ್ಲಿಯೂ ಲೋಲುಪನಾಗಲಿಲ್ಲ ಎಂಬ ಅರಿವು ಮಾತ್ರ. ●

ಮುಂದೆ ಕೆಲವೇ ಸಮಯದಲ್ಲಿ, ಅದೇ ವರ್ಷ, ೧೮೯೮, ಅವರ ತಂದೆತಾಯಿಯರ ಆರ್ಥಿಕ ಸ್ಥಿತಿಗತಿಗಳು ತಕ್ಕಮಟ್ಟಿಗೆ ಸುಧಾರಿಸಿದಾಗ ಐನ್‌ಸ್ಟೈನ್ ತಮ್ಮ ತಂಗಿಗೆ ಬರೆದರು :

● ಮಾಡಬೇಕಾದ ಕೆಲಸ ತಕ್ಕಷ್ಟು ಇದೆ. ಆದರೆ ಅತಿ ಏನೂ ಅಲ್ಲ. ಹೀಗಾಗಿ ಝೂರಿಕ್ಕಿನ ಸುಂದರ ವಲಯಗಳಲ್ಲಿ ಆಗ ಈಗ ಒಂದಷ್ಟು ಹೊತ್ತು ಅಡ್ಡಾಡಲು ನನಗೆ ಅವಕಾಶ ಒದಗಿದೆ. ಇದರ ಜೊತೆಗೆ ನನ್ನ ತಂದೆ ತಾಯಿಯರ ಕಡು ಬೇಗೆಯ ದಿನಗಳು ಸದ್ಯ ಕೊನೆಗೊಂಡಿವೆಯಲ್ಲ ಎಂಬ ಯೋಚನೆ ನನಗೆ ಮುದವೀಯುತ್ತಿದೆ. ಪ್ರತಿಯೊಬ್ಬನೂ ನನ್ನಂತೆ ಬದುಕಿದ್ದಾಗಿದ್ದರೆ ರಮ್ಯ ಕಾದಂಬರಿಗಳ ಬರವಣಿಗೆ ಎಂದೂ ಅಸ್ತಿತ್ವಕ್ಕೆ ಬರುತ್ತಿರಲಿಲ್ಲ ಎಂಬುದು ಖಾತ್ರಿ. ●

ಐನ್‌ಸ್ಟೈನರ ವಿದ್ಯಾರ್ಥಿಜೀವನದ ಆರಂಭದ ದಿನಗಳನ್ನು ಹಿಂದೆ ಬಿಟ್ಟು, ಅವರು ಬರ್ಲಿನ್ನಿನಲ್ಲಿ ಪ್ರಶ್ಯನ್ ಅಕಾಡೆಮಿ ಆಫ್ ಸೈನ್ಸಸ್ಸಿನ ಸದಸ್ಯರಾಗಿದ್ದ ಮೊದಲದಿನಗಳಿಗೆ ಸಾಗೋಣ. ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತ ಪೂರ್ಣಗೊಂಡ ಅನಂತರದ ದಿನಗಳಲ್ಲಿ, ೧೯೧೮, ಜ್ಯೂರಿಕ್ಕಿನ ಫೆಡರಲ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಐನ್‌ಸ್ಟೈನ್ ಬರ್ಲಿನ್ನನ್ನು ತೊರೆದು ಪಾಲಿಟೆಕ್ನಿಕ್ ಇನ್‌ಸ್ಟಿಟ್ಯೂಟಿಗೆ ಪ್ರಾಧ್ಯಾಪಕರಾಗಿ ಮರಳಲು ಒಪ್ಪಬಹುದೇ ಎಂದು ತಿಳಿಯಲು ಸಂಧಾನಗಳನ್ನು ಹೂಡಿತು. ಆಗ ಐನ್‌ಸ್ಟೈನ್ ತಮ್ಮ ತಂಗಿಗೆ ಹೀಗೆ ಬರೆದರು (ಕೊನೆಯಲ್ಲಿ ಕಂಡುಬರುವ ಚುಕ್ಕಿಗಳು ಮೂಲದಲ್ಲೇ ಇರುವಂಥವು) :

● ಬರ್ಲಿನ್ನನ್ನು ಪೂರ್ಣವಾಗಿ ತೊರೆದುಹೋಗುವಂಥ ಮನಃಸ್ಥಿತಿಯನ್ನು ನಾನು ಕಲ್ಪಿಸಿಕೊಳ್ಳಲಾರೆ. ಇಲ್ಲಿ ಜನ ವರ್ಣನಾತೀತವೆನಿಸುವಷ್ಟು ಕರುಣಾಮಯಿಗಳು ಮತ್ತು ಉಪಕಾರಿಗಳು. ಹದಿನೆಂಟು ವರ್ಷಗಳ ಹಿಂದೆ ನಾನು ಫೆಡರಲ್ ಇನ್‌ಸ್ಟಿಟ್ಯೂಟಿನಲ್ಲಿ ಕನಿಷ್ಠವರ್ಗದ ಸಹಾಯಕನಾಗಿ ನೇಮಕ ಪಡೆದುದಾಗಿದ್ದರೂ ಅದೆಷ್ಟು ಖುಷಿಪಟ್ಟಿರುತ್ತಿದ್ದೆ ! ಆದರೆ ಆಗ ನಾನು ಜಯಶೀಲನಾಗಲಿಲ್ಲ. ಈ ಪ್ರಪಂಚವೊಂದು ಹುಚ್ಚಾಸ್ಪತ್ರೆ. ಖ್ಯಾತಿಯೇ ಸರ್ವಸ್ವ. ನಿಜಸಂಗತಿ ಎಂದರೆ ಇತರ ಮಂದಿ ಕೂಡ ಚೆನ್ನಾಗಿಯೇ ಉಪನ್ಯಾಸವೀಯುತ್ತಾರೆ—ಆದರೆ.... ●

ಈ ಮುಂದಿನ ಕಾಗದವಾದರೂ ಐನ್‌ಸ್ಟೈನ್ ತಮ್ಮ ತಂಗಿ ಮಾಜಾರಿಗೇ ಬರೆದದ್ದು—ಆದರೆ ಬಹುಕಾಲಾನಂತರದಲ್ಲಿ, ೧೯೩೫ ಆಗಸ್ಟ್ ೩೧ರಂದು. ಬರ್ಲಿನ್ನಿನ ಆ ಆರಂಭದ ದಿನಗಳ ಅನಂತರ ಹಲವಾರು ಘಟನೆಗಳು ನಡೆದುಹೋಗಿವೆ. ಐನ್‌ಸ್ಟೈನ್ ಈಗ ಪ್ರಿನ್‌ಸ್ಟನ್ನಿನಲ್ಲಿದ್ದಾರೆ. ತಮ್ಮ ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತವನ್ನು ಸಾರ್ವತ್ರೀಕರಿಸಿ ಏಕೀಕೃತ ಸಿದ್ಧಾಂತವನ್ನು[8] ಸಿದ್ಧಿಸಲು ಹೆಣಗುತ್ತಿದ್ದಾರೆ. ಅದೇ ವೇಳೆ, ಹೆಚ್ಚಿನ ಎಲ್ಲ ಭೌತವಿಜ್ಞಾನಿಗಳೂ ಸಂತೃಪ್ತ ಮನೋಭಾವದಿಂದ ಅಂಗೀಕರಿಸಿದ್ದ ಶಕಲಸಿದ್ಧಾಂತದಲ್ಲಿಯ ಅಭಿವರ್ಧನೆಗಳ ಬಗೆಗೆ ಜಾಗರೂಕತೆಯಿಂದ ಇರಬೇಕೆಂದು ಇವರ ಅಂತರ್ಬೋಧೆಯ ಎಲ್ಲ ಮಿಡಿತಗಳೂ ಸಾರಿ ಹೇಳುತ್ತಿವೆ. ಭೌತವಿಜ್ಞಾನದ ಸಮಸ್ಯೆಗಳಲ್ಲಿಯೇ ಇವರು ಪೂರ್ಣ ಮಗ್ನರಾಗಿರುವರಾದರೂ ಬಾಹ್ಯ

ಪ್ರಪಂಚದಲ್ಲಿ ಏನು ಸಂಭವಿಸುತ್ತಿದೆ ಎನ್ನುವುದರ ಬಗೆಗೆ ಕುರುಡರೇನೂ ಆಗಿಲ್ಲ. ತಂಗಿಗೆ ಬರೆಯುತ್ತಾರೆ :

● ನನ್ನ ಸಂಶೋಧನೆಯ ಬಗೆಗೆ ಹೇಳುವುದಾದರೆ ಅದರ ಪ್ರಾರಂಭ ಆಶಾದಾಯಕವಾಗಿದ್ದರೂ ಪ್ರಗತಿ ಮಾತ್ರ ಮಂದವಾಗಿದೆ, ಜಿಗುಟಾಗಿದೆ. ಭೌತವಿಜ್ಞಾನದಲ್ಲಿ ನಡೆಯುತ್ತಿರುವ ಮೂಲಭೂತ ಸಂಶೋಧನೆಗಳಲ್ಲಿ ನಾವಿನ್ನೂ ಪರಡು ಸ್ಥಿತಿಯಲ್ಲಿಯೇ ಇದ್ದೇವೆ—ಒಬ್ಬಾತ ಹೆಚ್ಚಿನ ಆಶಾ ಭಾವನೆಯಿಂದ ಪ್ರಯತ್ನಿಸುತ್ತಿರುವ ವಿಷಯದ ಬಗ್ಗೆ ಇತರ ಯಾರಿಗೂ ವಿಶ್ವಾಸವಿರದಂಥ ಪರಿಸ್ಥಿತಿ. ಒಬ್ಬಾತ ಆತನ ಸಮಸ್ತ ಜೀವನವನ್ನು, ಆತ ತೊಲಗಿಹೋಗಲು ಕಾಲ ಕೂಡಿಬರುವ ತನಕವೂ, ನಿರಂತರ ಕರ್ಷಣ ದಲ್ಲಿಯೇ[9] ತಳ್ಳುತ್ತಿರುತ್ತಾನೆ. ಆದರೆ ನಾನು ಮಾಡಿರುವ ಕೆಲಸದ ಸಾರ ಭೂತಾಂಶ ನಮ್ಮ ವಿಜ್ಞಾನದ ಸ್ವೀಕೃತ ಆಧಾರ ವಿಷಯವಾಗಿದೆಯೆಂಬ ಒಂದು ಸಮಾಧಾನ ಮಾತ್ರ ನನಗಿದೆ.

ವರ್ತಮಾನಕಾಲದ ಭಾರೀ ರಾಜಕೀಯ ವ್ಯವಹಾರಗಳು ಎದೆ ಒಡೆಯು ವಂತಿವೆ. ಇವುಗಳ ನಡುವೆ ನಮ್ಮ ತಲೆಮಾರಿನ ಒಬ್ಬಾತನಿಗೆ ತಾನು ಪೂರ್ತಿ ಒಂಟಿಗನಾಗಿದ್ದೇನೆಂಬ ಭಾವ ಮೂಡುವುದು ಸಹಜ. ಜನರು ನ್ಯಾಯ ಮತ್ತು ಘನತೆ ಬಗೆಗಿನ ಗಾಢಾಸಕ್ತಿಯನ್ನು ಕಳೆದುಕೊಂಡಿರುವರೋ ನಮ್ಮದಕ್ಕಿಂತ ಮೇಲುಮಟ್ಟದ ತಲೆಮಾರುಗಳು ಅಸಾಧಾರಣ ತ್ಯಾಗ ತಪಸ್ಸುಗಳಿಂದ ಗಳಿಸಿದ ಮೂಲ್ಯಗಳನ್ನು ಇವರು ಕಡೆಗಣಿಸಿರುವರೋ ಎಂಬಂತೆ ತೋರುತ್ತಿದೆ....ನಿಜಕ್ಕೂ ಮಾನವೀಯ ಮೌಲ್ಯವೆಲ್ಲವುಗಳ ಅಡಿ ಪಾಯವಾದರೂ ಏನು ? ನೈತಿಕತೆ. ಅಂದಿನ ಆ ಆದಿಮ ದಿನಗಳಲ್ಲಿ ಈ ಸತ್ಯ ವನ್ನು ಸ್ಪಷ್ಟವಾಗಿ ಗುರುತಿಸಿದ್ದು ನಮ್ಮ ಮೋಸಸನ[10] ವಿಶಾಲ ಮಹಾನು ಭಾವತೆ. ಇದಕ್ಕೆ ವೈದೃಶ್ಯವಾಗಿ ಇಂದಿನ ಮಂದಿಯನ್ನು ನೋಡು !.... ●

೧೯೩೭ರಲ್ಲಿ ಐನ್‌ಸ್ಟೈನ್ ತಮ್ಮ ತಂಗಿಗೆ ಬರೆದರು :

● ನಾನಿಲ್ಲಿ ಏನು ಮಾಡುತ್ತಿದ್ದೇನೆ ಗೊತ್ತೇ ? ಉತ್ತರ ಬರೆಯ ದಿರುವ ಕಾಗದಗಳನ್ನು ನನ್ನಲ್ಲಿ ಸಕಾರಣವಾಗಿಯೇ ಅಸಮಾಧಾನ ತಳೆದಿ ರುವ ಜನರನ್ನೂ ಕಲೆಹಾಕುತ್ತಿದ್ದೇನೆ, ಬೇರೇನೂ ಅಲ್ಲ. ಗರಬಡಿದವನೊಬ್ಬ ನಿಂದ ಬೇರೇನು ತಾನೇ ಸಾಧ್ಯವಾದೀತು ? ನನ್ನ ತಾರುಣ್ಯದಲ್ಲಿ ಹೇಗೋ ಈಗಲೂ ಹಾಗೆ ಇಲ್ಲಿ ನಾನು ನಿಸರ್ಗದ ಗಂಭೀರ ರಹಸ್ಯಗಳನ್ನು ಅನಾವರಣ

ಮಾಡಿಯೇನೆಂಬ ಆಸೆಹೊತ್ತು ಸದಾ ಚಿಂತನೆ ಗಣನೆಗಳಲ್ಲಿ ಮಗ್ನನಾಗಿದ್ದೇನೆ. ಮಹಾಪ್ರಪಂಚವೆಂಬ ಹೆಸರು ಹೊತ್ತಿರುವ ಈ ಮನುಷ್ಯರ ಗಲಭೆಗೊಂದಲಗಳಿಂದ ನಾನೀಗ ಎಂದಿಗಿಂತಲೂ ದೂರಸರಿಯುತ್ತಿದ್ದೇನೆ. ಹೀಗಾಗಿ ಪ್ರತಿದಿವಸವೂ ನಾನೊಬ್ಬ ಆಶ್ರಮವಾಸಿ ಆಗುತ್ತಿರುವೆ ಎಂದು ಅನ್ನಿಸುತ್ತಿದೆ.

ಝೂರಿಕ್ಕಿನಲ್ಲಿದ್ದ ತಮ್ಮ ಸ್ನೇಹಿತ ಹೈನ್ರಿಕ್ ಟ್ಸೇಂಗರ್ ಅವರಿಗೆ ಐನ್‌ಸ್ಟೈನ್ ೧೯೧೮ರ ವಸಂತದಲ್ಲಿ ಬರೆದ ಒಂದು ಕಾಗದದಿಂದ ಆಯ್ದ ಕೆಲವು ಭಾಗಗಳು ಇಲ್ಲಿವೆ. ಆ ವೇಳೆಗಾಗಲೇ ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತ ಪ್ರತಿಪಾದಿಸಲ್ಪಟ್ಟಿತ್ತು. ಆದರೆ ಗ್ರಹಣಪರೀಕ್ಷೆ ಹಾಗೂ ಪ್ರಪಂಚಖ್ಯಾತಿ ಇನ್ನೂ ಭವಿಷ್ಯದ ಗರ್ಭದಲ್ಲಿ ಹುದುಗಿದ್ದುವು. ಐನ್‌ಸ್ಟೈನರ ಹಿರಿಮಗ, ಸುಮಾರು ಹದಿನಾಲ್ಕರ ಹೈದ, ಆ ವೇಳೆಗೆ ಎಂಜಿನಿಯರಿಂಗ್ ಮತ್ತು ತಂತ್ರವಿದ್ಯೆಗಳ ಬಗೆಗೆ ವಿಶೇಷ ಕುತೂಹಲ ಪ್ರಕಟಿಸುತ್ತಿದ್ದ:

ಪ್ರಾರಂಭದಲ್ಲಿ ನಾನೂ ಒಬ್ಬ ಎಂಜಿನಿಯರ್ ಆಗಲಿರುವಾತ ಎಂದು ಭಾವಿಸಲಾಗಿತ್ತು. ಆದರೆ ದೈನಂದಿನ ಜೀವನವನ್ನು ಇನ್ನಷ್ಟು ವಿಸ್ತಾರಗೊಳಿಸುವ ವಿಷಯಗಳತ್ತ ನನ್ನ ಸೃಷ್ಟಿಶೀಲಸಾಮರ್ಥ್ಯವನ್ನು ಹರಿಸುವುದು ಪೂರ್ಣ ಅಸಹನೀಯವೆಂದು ನನಗನ್ನಿಸಿತು—ಅದೂ ಖಾಲಿ ರೊಕ್ಕಗಳಿಸುವ ದಂಧೆಗಾಗಿ. ಚಿಂತನೆಗಾಗಿಯೇ ಚಿಂತನೆ, ಸಂಗೀತದಲ್ಲಿಯಂತೆ! ನನ್ನ ಮನಸ್ಸು ಯಾವುದೇ ವಿಶಿಷ್ಟ ಸಮಸ್ಯೆಯಿಂದ ಬಂಧಿತವಾಗಿರದಾಗ, ಲಾಗಾಯಿತಿನಿಂದಲೂ ನನಗೆ ಪರಿಚಿತವಿರುವ ಗಣಿತ ಹಾಗೂ ಭೌತ ಪ್ರಮೇಯಗಳ ಸಾಧನೆಗಳನ್ನು ಪುನಾರಚಿಸುವುದರಲ್ಲಿ ನಾನು ಖುಷಿ ಪಡೆಯುತ್ತೇನೆ. ಇಲ್ಲಿ **ಗುರಿ** ಏನೂ ಇಲ್ಲ, ಚಿಂತನೆಯ ಉಲ್ಲಾಸದಾಯಕ ಪ್ರಕ್ರಿಯೆಯಲ್ಲಿ ಭಾಗಿಯಾಗುವ ಅವಕಾಶವೊಂದೇ.

ಐನ್‌ಸ್ಟೈನರ ವೈಜ್ಞಾನಿಕ ಅಭಿಪ್ರೇರಣೆಯ ಬಗ್ಗೆ ಪ್ರಶ್ನೆ ಕೇಳಿ ಬಂದಿದ್ದ ಕಾಗದಕ್ಕೆ ಅವರು ೧೯೪೯ ಆಗಸ್ಟ್ ೨೦ರಂದು ಉತ್ತರವಿತ್ತರು. ಭಾಷೆ ಇಂಗ್ಲಿಷ್:

ನಿಸರ್ಗದ ರಹಸ್ಯಗಳನ್ನು ಗ್ರಹಿಸಬೇಕೆಂಬ ಅದಮ್ಯದಾಹದಿಂದ ನನ್ನ ವೈಜ್ಞಾನಿಕ ಕಾರ್ಯ ಅಭಿಪ್ರೇರಿತವಾಗಿದೆಯೇ ವಿನಾ ಬೇರಾವ ಭಾವನೆ

ವಿಜ್ಞಾನಿ ಯೋಹಾನೆಸ್ ಸ್ಟಾರ್ಕ್[13] ಎಂಬವರಿಗೆ (ಅನಂತರದ ದಿನಗಳಲ್ಲಿ ಇವರು ನೊಬೆಲ್ ಪ್ರಶಸ್ತಿ ಗಳಿಸಿದರು) ಒಂದು ಪೋಸ್ಟ್‌ಕಾರ್ಡ್ ಬರೆದರು. ಅದರ ಉದ್ಧೃತಾಂಶ :

● ಜಡಾತ್ಮಕ ದ್ರವ್ಯರಾಶಿ ಮತ್ತು ಶಕ್ತಿ ಇವುಗಳ ನಡುವಿನ ಸಂಯೋಜನೆಯನ್ನು ಕುರಿತಂತೆ ನನ್ನ ಆದ್ಯತೆಗೆ ನೀವು ಮನ್ನಣೆ ಕೊಡದಿರುವುದನ್ನು ಕಂಡು ನಾನು ಒಂದಿಷ್ಟು ಚಕಿತನಾಗಿದ್ದೇನೆ. ●

ಈ ಉಲ್ಲೇಖ ಐನ್‌ಸ್ಟೈನರ, ಈಗ ಸುವಿಖ್ಯಾತವಾಗಿರುವ, $E=mc^3$ ಸಮೀಕರಣವನ್ನು ಕುರಿತದ್ದಾಗಿತ್ತು. ತಮ್ಮ ಹೃದಯಸ್ಪರ್ಶಿ ಸ್ನೇಹವನ್ನೂ ಅಭಿಮಾನವನ್ನೂ ಪ್ರದರ್ಶಿಸುವ ಸವಿವರ ಪ್ರತ್ಯುತ್ತರವನ್ನು ಸ್ಟಾರ್ಕ್, ಏಕಸ್ವ ತಪಾಸಣೆಗಾರ ಐನ್‌ಸ್ಟೈನರಿಗೆ, ಫೆಬ್ರುವರಿ ೧೯ರಂದು ಬರೆದು ತಾವು ಸಂದರ್ಭವೊದಗಿದಾಗಲೆಲ್ಲ ಅವರ ಬಗೆಗೆ ಒಳ್ಳೆಯ ಮಾತು ನುಡಿದಿರುವುದಾಗಿ ಆಶ್ವಾಸಿಸಿದರು. ಹೀಗಿದ್ದೂ ಇವರು ಅನ್ಯಥಾ ಭಾವಿಸಿದ್ದರೆ ಅಂಥ ಬಾವನೆ ತಪ್ಪೆಂದು ಹೇಳಿದರು. ೧೯೦೮ ಫೆಬ್ರುವರಿ ೨೨ರಂದು ಐನ್‌ಸ್ಟೈನ್ ಮಾರೋಲೆ ಬರೆದರು :

● ಆದ್ಯತೆಯ ಬಗೆಗಿನ ಆ ಹೇಳಿಕೆಗೆ ಪ್ರಕಟಿತ ರೂಪ ಕೊಡುವಲ್ಲಿ ನಾನು ಕ್ಷಣಿಕ ಕ್ಷುದ್ರ ಮಾನಸಿಕ ಆವೇಗದ ಒತ್ತಡಗಳಿಗೆ ವಶವರ್ತಿ ಆಗಿದ್ದೆನೆಂಬುದಕ್ಕಾಗಿ ನಿಮ್ಮ ಮಾರೋಲೆ ತಲಪುವ ಮೊದಲೇ ಅತಿಯಾಗಿ ಪರಿತಪಿಸಿದ್ದೆ. ಈಗ ಬಂದಿರುವ ನಿಮ್ಮ ಸವಿವರ ಪತ್ರ ಹೇಗೆ ನನ್ನ ಅತಿ ಸಂವೇದಿತ್ವ ಆದೆಂಥ ಅಸಂಬದ್ಧ ನಿಲವಾಗಿತ್ತೆಂಬುದನ್ನು ತುಂಬ ಚೆನ್ನಾಗಿ ತೋರಿಸಿಕೊಟ್ಟಿದೆ. ವಿಜ್ಞಾನದ ಮುನ್ನಡೆಗೆ ಏನಾದರೂ ಕೊಡುಗೆ ಸಲ್ಲಿಸಲು ಭಾಗ್ಯ ಪಡೆದವರು ಅವರ ಸಾಮೂಹಿಕ ಪ್ರಯತ್ನಗಳ ಫಲವಾಗಿ ಸಿದ್ಧಿಸಿದ ಫಲಗಳ ಆನಂದ ಸ್ವಲ್ಪವೂ ಮಬ್ಬಾಗದಂತೆ ಎಚ್ಚರವಹಿಸುವುದು ಅಗತ್ಯ.... ●

ಈ ಸ್ನೇಹಶೀಲ ವಿನಿಮಯದ ಉತ್ತರಾರ್ಧ, ದುರದೃಷ್ಟವಶಾತ್, ಅಷ್ಟೇನೂ ಸ್ನೇಹಶೀಲವಾಗಿರಲಿಲ್ಲ. ನಾಟ್ಸಿಗಳ ಆಗಮನದೊಂದಿಗೆ ಸ್ಟಾರ್ಕ್, ಇತರ ಅನೇಕ ಮಂದಿಯಂತೆ, ಶುಷ್ಕ ತಾತ್ತ್ವಿಕ ನೆಲೆಯಲ್ಲಿ ಐನ್‌ಸ್ಟೈನ್ ಮತ್ತು ಇವರ ಕೃತಿಗಳ ಕಟು ವಿಮರ್ಶಕರಾದರು.

೧೯೨೭ರ ಮಾರ್ಚಿಯಲ್ಲಿ ಐನ್‌ಸ್ಟೈನ್ ನೀಡಿದ ಒಂದು ಉಪನ್ಯಾಸವನ್ನು

ಒಬ್ಬ ಸಭಾಸದ ಅಕ್ಷರಶಃ ಬರೆದುಕೊಂಡ. ಅದನ್ನು *Die Naturwissenschaften* ಎಂಬ ವೈಜ್ಞಾನಿಕ ಪತ್ರಿಕೆಯಲ್ಲಿ ಪ್ರಕಟಿಸಬೇಕೆಂಬುದಾಗಿ ಅವನು ಪತ್ರಿಕೆಯ ಸಂಪಾದಕ ಆರ್ನಾಲ್ಡ್ ಬರ್ಲಿನರ್‌ನಿಗೆ ಸೂಚನೆ ನೀಡಿದ. ಬರ್ಲಿನರ್ ಇದರ ಬಗ್ಗೆ ಐನ್‌ಸ್ಟೈನರ ಸಲಹೆ ಕೇಳಿದಾಗ ಇವರ ಅನುಕ್ರಿಯೆ ಹೀಗಿತ್ತು :

● ಆ ಉಪನ್ಯಾಸದಲ್ಲಿ ಅಂಥ ಸ್ವಂತಿಕೆಯೇನೂ ಇರಲಿಲ್ಲ. ಎಂದೇ ಅದರ ಪ್ರಕಟಣೆಯನ್ನು ನಾನು ಅನುಮೋದಿಸಲಾರೆ. ಒಬ್ಬಾತ, ವಿಶಿಷ್ಟವಾಗಿ ಆತನ ಬಗೆಗೆ, ವಿಮರ್ಶಾತ್ಮಕವಾಗಿರತಕ್ಕದ್ದು. ಅಮುಖ್ಯವಾದ ಎಲ್ಲವನ್ನೂ ಆತ, ಸಾಧ್ಯವಾಗುವಷ್ಟರಮಟ್ಟಿಗೆ, ವರ್ಜಿಸಿದಾಗ ಮಾತ್ರ ಜನ ಆತನನ್ನು ಓದಿಯಾರೆಂದು ನಿರೀಕ್ಷಿಸಬಹುದು, ಅಷ್ಟೆ. ●

ಫಿಲಿಪ್ ಫ್ರ್ಯಾಂಕ್ ಎಂಬವರು ಬರೆದಿರುವ ಐನ್‌ಸ್ಟೈನರ ಉತ್ಕೃಷ್ಟ ಜೀವನ ಚರಿತ್ರೆಯನ್ನು ವಿಮರ್ಶಿಸುವ ಸಂದರ್ಭದಲ್ಲಿ ಒಬ್ಬ ವಿಮರ್ಶಕ, ಮ್ಯಾಕ್ಸ್ ಬ್ರಾಡ್ ಎಂಬ ಲೇಖಕ ಇದೇ ವಿಷಯದ ಮೇಲೆ ಬರೆದಿದ್ದ ಒಂದು ಪುಸ್ತಕದ ಬಗೆಗೆ, ದೋಷಯುಕ್ತ ಟೀಕೆ ಎಸೆದಿದ್ದ. ಇದರಿಂದ ಕುಪಿತರಾದ ಬ್ರಾಡ್ ಅವರಿಗೆ ಐನ್‌ಸ್ಟೈನ್ ೧೯೪೯ ಫೆಬ್ರುವರಿ ೨೨ರಂದು ಈ ಮುಂದಿನ ಕಾಗದ ಬರೆದರು :

● *The [London] Times Literary Supplement* ಪತ್ರಿಕೆಯಲ್ಲಿ ಪ್ರಕಟವಾಗಿರುವ ವಿಮರ್ಶಾವಲೋಕನದ ಬಗೆಗಿನ ನಿಮ್ಮ ಸಾತ್ತ್ವಿಕಾಕ್ರೋಶ ನನ್ನಲ್ಲಿ ಸ್ನೇಹಮಯ ಸುಹಾಸವನ್ನು ಮೂಡಿಸಿತು. ಯಾರೋ ಒಬ್ಬ ವಿಮರ್ಶಕ ತುಣುಕು ಕಾಸಿನ ಆಸೆಗಾಗಿ ಕೇವಲ ಹೊರ ಚಕ್ಕಳ ಮಾತ್ರ ಕೆರೆದು ಅದರ ಆಧಾರದ ಮೇಲೆ ಅರ್ಧ ಸತ್ಯವೆಂಬ ಭ್ರಮೆ ತರಿಸುವಂಥ ಏನನ್ನೋ ಗೀಚುತ್ತಾನೆ. ಇದನ್ನು ಯಾರೂ ವಿಶೇಷವಾಗಿ ಗಮನಿಸುವುದಿಲ್ಲ. ಇಂಥ ಕ್ಷುದ್ರ ವಿಷಯವನ್ನು ನೀವಾದರೂ ಗಂಭೀರವಾಗಿ ಪರಿಗಣಿಸಬೇಕೇಕೆ ? ನನ್ನನ್ನು ಕುರಿತಂತೆ ಈಗಾಗಲೇ ರಾಶಿರಾಶಿ ಸುಳ್ಳುಕಂತೆಗಳೂ ಕುಹಕ ಕೊಂಕುಗಳೂ ಪ್ರಕಟವಾಗಿವೆ. ಕವಡೆ ಕಿಮ್ಮತ್ತನ್ನಾದರೂ ಅವುಗಳಿಗೆ ನಾನು ಕೊಟ್ಟಿದ್ದಾಗಿದ್ದರೆ ಎಂದೊ ಮಸಣಪಾಲಾಗಿ ಹೋಗಿರುತ್ತಿದ್ದೆ. ಕಾಲವೆಂಬ ಜಂದರಿ ಮೂಲಕ ಜರಡಿಸಿದಾಗ ಹೆಚ್ಚಿನ ಈ ಮುಖ್ಯ ಸಂಗತಿಗಳು ಕೆಳಸೋರಿ ಕಡಲಿನಾಳದಲ್ಲಿ ಮರೆಯಾಗಿಹೋಗುತ್ತವೆ. ಈ ಆಯ್ಕೆಯ

ಅನಂತರವಾದರೂ ಉಳಿಯುವುದು ಬಹುತೇಕ ಸವಕಲು ನಾಣ್ಯ ಮತ್ತು ಹಳಸಲು ವಸ್ತು !●

ತಮ್ಮ ಸ್ನೇಹಿತ ಏರೆನ್‌ಫೆಸ್ಟ್ ಅವರಿಗೆ ಐನ್‌ಸ್ಟೈನ್ ೧೯೩೦ ಮಾರ್ಚ್ ೨೧ರಂದು ಬರೆದ ಕಾಗದದಿಂದ ಉದ್ಧರಿಸಿದ ಒಂದು ಪೂರಕವಾಕ್ಯ :

● ನಾನು ಪೀಪಿ ಊದಿದರೂ ಅದು ತುತ್ತೂರಿ ಮೊಳಗಾಗುತ್ತಿದೆ.●

ತಮ್ಮ ಜೀವನಚರಿತ್ರಕಾರ ಕಾರ್ಲ್ ಸೀಲಿಗ್ ಅವರಿಗೆ ೧೯೫೨ ಅಕ್ಟೋಬರ್ ೨೫ರಂದು ಬರೆದ ಕಾಗದದಿಂದ ಆಯ್ದ ಇನ್ನೊಂದು ಪೂರಕವಾಕ್ಯ :

●ನನ್ನ ಒಂದೊಂದು ಖಾಸಗಿ ನುಡಿಯನ್ನೂ ಜನ ಕಬಳಿಸಿ ದಾಖಲಿಸ ಬಹುದೆಂಬ ಸಂಗತಿ ಈ ಹಿಂದೆ ಎಂದೂ ನನಗೆ ಹೊಳೆದಿರಲಿಲ್ಲ; ಅಲ್ಲದಿದ್ದರೆ ನಾನು ಇನ್ನಷ್ಟು ಚಿಪ್ಪಿನೊಳಹೊಕ್ಕಿರುತ್ತಿದ್ದೆ.●

ಇಂಗ್ಲಿಷರ ಕೆಲವು ವರ್ತನೆಗಳು ಐನ್‌ಸ್ಟೈನರಿಗೆ ಅರ್ಥವಾಗದ ಒಗಟುಗಳಾಗಿದ್ದುವು. ೧೯೩೦ರಷ್ಟು ಹಿಂದೆ ನಡೆದ ಒಂದು ಘಟನೆಯನ್ನು ಇವರ ಕಾರ್ಯದರ್ಶಿ ಹೆಲನ್ ಡ್ಯೂಕಾಸ್[14] ಸ್ಪಷ್ಟವಾಗಿ ಮರುನೆನೆಯುತ್ತಾರೆ. ಐನ್‌ಸ್ಟೈನರನ್ನು ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ ಒಯ್ಯುತ್ತಿದ್ದ ಹಡಗು ಸೌಥ್ಯಾಂಪ್ಟನ್ನಿನಲ್ಲಿ ಒಂದಷ್ಟು ಹೊತ್ತು ತಂಗಿತ್ತು. ಆಗ ಬ್ರಿಟಿಷ್ ವರದಿಗಾರನೊಬ್ಬ ತನಗೆ ಐನ್‌ಸ್ಟೈನರೊಡನೆ ಭೇಟಿ ದೊರೆಕೀತೇ ಎಂಬುದಾಗಿ ಕಾರ್ಯದರ್ಶಿಯನ್ನು ಕೋರಿದ. ಐನ್‌ಸ್ಟೈನರ ಇಚ್ಛೆ ಅರಿತಿದ್ದ ಈಕೆ 'ಇಲ್ಲ'ವೆಂದು ನಿರಾಕರಿಸಿ ಮುಂದೆ ಖಾತ್ರಿ ನಡೆಯಲಿದ್ದ ಕಾಳೆಗವನ್ನು ಎದುರಿಸಲು ತಯಾರಾಗಿ ನಿಂತರು. ಆದರೆ ಈಕೆಗೆ ಆಶ್ಚರ್ಯವಾಗುವ ರೀತಿಯಲ್ಲಿ ಆತ ಆ 'ಇಲ್ಲ'ವನ್ನು ಮರುಸೊಲ್ಲಿಲ್ಲದೆ ಒಪ್ಪಿಕೊಂಡು ಹೊರಟು ಹೋದ. ಇದು ಒಂಟಿ ಘಟನೆಯೇನೂ ಆಗಿರಲಿಲ್ಲ. ಇದೇ ಉದ್ದೇಶದಿಂದ ಅಲ್ಲಿಗೆಬಂದಿದ್ದ ಪತ್ರಿಕಾಕರ್ತರು ಕೂಡ ಹೀಗೆಯೇ ವರ್ತಿಸಿದರು.ಡ್ಯೂಕಾಸ್ ಈ ಸಮಾಚಾರವನ್ನು ಐನ್‌ಸ್ಟೈನರಿಗೆ ತಿಳಿಸಿದರು. ಇದರಿಂದ ಪ್ರೇರಿತರಾದ ಐನ್‌ಸ್ಟೈನ್ ತಮ್ಮ ಪ್ರವಾಸ ದಿನಚರಿಯಲ್ಲಿ ಭಾಗಶಃ ಈ ಮುಂದಿನದನ್ನು ನಮೂದಿಸಿದರು :

● ೩ ಡಿಸೆಂಬರ್ ೧೯೩೦ (ಸೌಥ್ಯಾಂಪ್ಟನ್)....ಇಂಗ್ಲೆಂಡಿನಲ್ಲಿ ವರದಿಗಾರರು ಕೂಡ ತುಂಬ ಬಿಗುಮಾನಿಗಳು! ಗೌರವ ಸಲ್ಲಬೇಕಾದವನಿಗೆ ಗೌರವ.

ಒಂಟಿ 'ಇಲ್ಲ' ಸಾಕು. ಪ್ರಪಂಚ ಇನ್ನೂ ಕಲಿಯಲು ಇಲ್ಲಿ ಬೇಕಾದಷ್ಟು ಉಂಟು—ನನಗೆ ಮಾತ್ರ ಇದು ಆಗದೆಂಬ ಸಂಗತಿ ಅಲಾಯಿದ; ಪವಿತ್ರ ಧಾರ್ಮಿಕ ವಿಧಿಯಾದ ಭೋಜನ ವೇಳೆಯಲ್ಲಿ ಕೂಡ ನಾನು ದೊಗಲೆ ದುಸ್ತಿನಲ್ಲಿಯೇ ಇರುತ್ತೇನೆ. ●

ಪ್ರೊಫೆಸರ್ ಎಫ್.ಎ. ಲಿಂಡ್‌ಮ್ಯಾನ್—ಭವಿಷ್ಯದಲ್ಲಿ ಇವರು ವಿನ್‌ಸ್ಟನ್ ಚರ್ಚಿಲ್ಲರ[15] ವೈಜ್ಞಾನಿಕ ಸಲಹೆಗಾರರಾಗಲಿದ್ದರು— ಮುಂದೊಂದು ದಿವಸ ಆಕ್ಸ್‌ಫರ್ಡಿಗೆ ಐನ್‌ಸ್ಟೈನರ ಭೇಟಿಯನ್ನು ಏರ್ಪಡಿಸಿದ್ದರು. ಕ್ರೈಸ್ಟ್ ಚರ್ಚ್ ಕಾಲೇಜಿನಲ್ಲಿ ಇವರ ವಾಸ್ತವ್ಯ. ಇಲ್ಲಾದರೂ ಧಾರ್ಮಿಕಾಚರಣೆಗಳು ಆಕ್ಸ್‌ಫರ್ಡಿನ ಇತರ ಕಾಲೇಜುಗಳಲ್ಲಿದ್ದವುಗಳಿಗಿಂತ ಬೇರೆಯುವೇನೂ ಆಗಿರಲಿಲ್ಲ. ಇತರ ಹೆಚ್ಚಿನವುಗಳಂತೆ ಕ್ರೈಸ್ಟ್ ಚರ್ಚ್ ಕೂಡ ಪುರುಷರಿಗೆ ಮೀಸಲು. ಇಲ್ಲಿಯ ಕೊಠಡಿಗಳು ಬಲು ತಂಡಿ. ಪ್ರತಿ ಸಂಜೆ ಸಾಂಪ್ರದಾಯಿಕ ಸಮವಸ್ತ್ರಾಲಂಕೃತ ಶಿಕ್ಷಕರು ಮತ್ತು ವಿದ್ಯಾರ್ಥಿಗಳು—ಸುಮಾರು ಐನೂರು ಮಂದಿ—ಔಪಚಾರಿಕವಾಗಿ ಆ ವಿಶಾಲ ಭೋಜನಮಂದಿರದಲ್ಲಿ ಕಲೆತು ಗಂಭೀರವಾಗಿ ಲ್ಯಾಟಿನ್ ಭಾಷೆಯಲ್ಲಿ ಮಂತ್ರಪಠನ ಮಾಡುತ್ತಿದ್ದರು. ಐನ್‌ಸ್ಟೈನರ ಪ್ರವಾಸ ದಿನಚರಿಯಲ್ಲಿ ನಮೂದಾದ ಒಂದು ಅಂಶವಿದು :

● ಆಕ್ಸ್‌ಫರ್ಡ್ ೨/೩ ಮೇ ೧೯೩೧ : [ನನ್ನ] ಗೂಡಿನೊಳಗೆ ಶಾಂತ ವಾಸ್ತವ್ಯ. ಕಡುವಾಗಿ ಮಂಗಟ್ಟೆಹೋಗುತ್ತಿದ್ದೇನೆ. ಸಂಜೆ ಸಮವಸ್ತ್ರಧಾರಿ ಪವಿತ್ರ ಭ್ರಾತೃತ್ವದ ಜೊತೆ ಶಾಸ್ತ್ರೋಕ್ತ ಭೋಜನ. ●

ಬೇರೊಂದು ಬಗೆಯ ನಮೂದು ಇಲ್ಲಿದೆ, ಕಡಲಿನಲ್ಲಿ ಎದ್ದ ತುಫಾನಿನ ವರ್ಣನೆ :

● ೧೦ ಡಿಸೆಂಬರ್ ೧೯೩೧ : ಕಳೆದ ಇರುಳು ನಾನು ಕಂಡ ತುಫಾನು ! ಹಿಂದೆ ಎಂದೂ ಇಂಥ ಅನುಭವವಾಗಿರಲಿಲ್ಲ. . . .ಸಾಗರ ಅವರ್ಣನೀಯ ವೈಭವದಿಂದ ಕಂಗೊಳಿಸುತ್ತಿದೆ, ಅದೂ ಬಿಸಿಲು ಅದರ ಮೇಲೆ ಬಿದ್ದಾಗ.

ಒಬ್ಬಾತ ನಿಸರ್ಗದಲ್ಲಿ ಲೀನವಾಗಿ ಐಕ್ಯವಾಗಿಹೋದನೊ ಎಂಬಂಥ ಭಾವ ಮೂಡುತ್ತದೆ. ಎಲ್ಲದಕ್ಕಿಂತ ಮಿಗಿಲಾಗಿ ವ್ಯಕ್ತಿಯ ಕ್ಷುದ್ರತೆಯ ಅರಿವು ಆತನಿಗಾಗುತ್ತದೆ. ಇದು ಆತನನ್ನು ಪ್ರಸನ್ನಗೊಳಿಸುತ್ತದೆ. ●

ಡಾ. ಹ್ಯಾನ್ಸ್ ಮ್ಯಾಹ್‌ಸಮ್ ಎಂಬವರು ಬರ್ಲಿನ್ನಿನಲ್ಲಿ ಐನ್‌ಸ್ಟೈನರ ಒಬ್ಬ ವೈದ್ಯಕೀಯ ಮಿತ್ರ. ಇವರಿಗೆ ಐನ್‌ಸ್ಟೈನ್ ತಮ್ಮ ಒಂದು ಕೆತ್ತನೆ ಚಿತ್ರವನ್ನು ಕಳಿಸುತ್ತ ಅದರ ತಳದಲ್ಲಿ ಈ ಮುಂದಿನದನ್ನು ಬರೆದರು. ಅಂದಾಜು ೧೯೨೦ ಅಥವಾ ಕೊಂಚ ಮೊದಲು. ಕೆತ್ತನೆ ಚಿತ್ರ ತಯಾರಿಸಿದವರು ಹರ್ಮನ್ ಸ್ಟ್ರಕ್ :

● ಜ್ಞೇಯನಿಷ್ಠವಾಗಿ ಅಳೆದುದಾದರೆ ಒಬ್ಬ ವ್ಯಕ್ತಿ ಅವಿರತ ಪರಿಶ್ರಮ ವಹಿಸಿ ಋತದಿಂದ ಕಸಿದುಕೊಳ್ಳಬಹುದಾದದ್ದು ಅದರ ಅನಂತಸೂಕ್ಷ್ಮಾಂಶವನ್ನು ಮಾತ್ರ. ಆದರೆ ಈ ಸತತ ಪ್ರಯತ್ನ ನಮ್ಮನ್ನು ಸ್ವಾರ್ಥಬಂಧನಗಳಿಂದ ವಿಮೋಚನೆಗೊಳಿಸಿ ಪರಮೋತ್ಕೃಷ್ಟ ಹಾಗೂ ಮಹೋನ್ನತ ಪುರುಷರ ಸಂಗಾತಿಗಳಾಗಿ ಮಾಡುತ್ತದೆ. ●

ತಮ್ಮಂತೆಯೇ ಒಬ್ಬ ಸೈದ್ಧಾಂತಿಕ ಭೌತವಿಜ್ಞಾನಿ ಆಗಿದ್ದ ಪಾಲ್ ಏರೆನ್‌ಫೆಸ್ಟರಿಗೆ ಐನ್‌ಸ್ಟೈನ್ ೧೯೨೨ ಮಾರ್ಚ್ ೧೫ರಂದು ಬರೆದ ಒಂದು ಕಾಗದದಲ್ಲಿ ಈ ಮುಂದಿನ ಸಾಲು ಇತ್ತು :

● ನಿಸರ್ಗದ ಎದುರು—ಮತ್ತು ತನ್ನ ವಿದ್ಯಾರ್ಥಿಗಳ ಎದುರು ಕೂಡ—ನಿಂತ ಸೈದ್ಧಾಂತಿಕ ಭೌತವಿಜ್ಞಾನಿ ಎಂಥ ರಿಕ್ತ ಮತ್ತು ಅಸಮರ್ಪಕ ವ್ಯಕ್ತಿ ! ●

ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ, ೧೯೫೦ರ ಡಿಸೆಂಬರ್ ತರುಣದಲ್ಲಿ ಹಸ್ತಲಿಖಿತ ಸುದೀರ್ಘ ಪತ್ರವೊಂದು ಬಂದಿತು. ಬರೆದಾತ ರಟ್ಜರ್ಸ್ ವಿಶ್ವವಿದ್ಯಾಲಯದ ವಿದ್ಯಾರ್ಥಿ, ಹತ್ತೊಂಬತ್ತರ ಹರೆಯದವ. "ಮಾನ್ಯರೇ, ನನ್ನ ಪ್ರಶ್ನೆ ಇದು : 'ಭೂಮಿಯಲ್ಲಿ ಮಾನವನ ಗುರಿ ಏನು ?'" ಹಣಗಳಿಕೆ, ಕೀರ್ತಿಕಾಮನೆ, ಪರೋಪಕಾರ ಮುಂತಾದ ಸಾಧ್ಯ ಉತ್ತರಗಳನ್ನು ನಿರಾಕರಿಸುತ್ತ ಆ ವಿದ್ಯಾರ್ಥಿ ಬರೆದ "ಪ್ರಾಮಾಣಿಕವಾಗಿ ಹೇಳಬೇಕೆ, ಸ್ವಾಮಿ ? ನಾನೇಕೆ ಕಾಲೇಜಿಗೆ ಹೋಗುತ್ತಿದ್ದೇನೆ ಮತ್ತು ಎಂಜಿನಿಯರಿಂಗನ್ನು ವ್ಯಾಸಂಗಿಸುತ್ತಿದ್ದೇನೆ ಎಂಬುದು ಕೂಡ ನನಗೆ ತಿಳಿದಿಲ್ಲ." ಅವನ ಅಭಿಪ್ರಾಯ ಪ್ರಕಾರ ಭೂಮಿಯಲ್ಲಿ 'ಮಾನವನ ಅಸ್ತಿತ್ವಕ್ಕೆ ಯಾವುದೇ ಗುರಿ ಇಲ್ಲ' ಎಂದಿತ್ತು. ಬ್ಲೇಸ್ ಪಾಸ್ಕಲನ *Pensees* ಪುಸ್ತಕದಿಂದ ಅವನು ಈ ಮುಂದಿನ ಮಾತುಗಳನ್ನು ಉದ್ಧರಿಸುತ್ತ ಅವು ತನ್ನ ಭಾವನೆಗಳನ್ನು ಸಮರ್ಪಕವಾಗಿಯೂ ಅಡಕವಾಗಿಯೂ ಬಿಂಬಿಸುತ್ತವೆಂದ "ಯಾರು ನನ್ನನ್ನು ಈ ಪ್ರಪಂಚಕ್ಕೆ ತಂದರೆಂಬುದು ನನಗೆ ತಿಳಿಯದು. ಈ ಪ್ರಪಂಚ ಏನೆಂಬುದಾಗಲಿ ನಾನಾದರೂ ಏನೆಂಬುದಾಗಲಿ ಅರಿಯೆ. ಪ್ರತಿಯೊಂದರ ಬಗ್ಗೆಗೂ ನಾನು ಪೂರ್ಣ ಅಜ್ಞ. ನನ್ನ ದೇಹವೆಂದರೇನು, ಇಂದ್ರಿಯಗಳೆಂದರೇನು, ಪ್ರಾಣವೆಂದರೇನು—ಇವು ನನಗೆ ಗೊತ್ತಿಲ್ಲ. ಸ್ವತಃ ತನ್ನನ್ನೂ ಒಳಗೊಂಡಂತೆ ಎಲ್ಲ ಭಾಗಗಳ ಬಗೆಗೂ ವಿವೇಚನೆ ಮಾಡುತ್ತ ಆದರೂ ಖುದ್ದು ತನ್ನ ಬಗೆಗೇ ಇತರ ಭಾಗಗಳಿಗಿಂತ ಹೆಚ್ಚಿಗೆ ಏನನ್ನೂ ಅರಿತುಕೊಂಡಿಲ್ಲದಿರುವ ಹಾಗಿದ್ದರೂ ನಾನು ಹೇಳುವುದೆಲ್ಲವನ್ನೂ ಯೋಚಿಸುವ ನನ್ನ ಆ ಅಂಶವನ್ನು ಕೂಡ ನಾನು ತಿಳಿದುಕೊಂಡಿಲ್ಲ. ನನ್ನನ್ನು ಸುತ್ತಲೂ ಎತ್ತೆತ್ತಲೂ ಆವರಿಸಿರುವ ವಿಶ್ವದ ಆ ಭಯಕಾರಕ ವಿಸ್ತಾರಗಳನ್ನು ನೋಡಿ ನಾನು ವಿಹ್ವಲನಾಗಿದ್ದೇನೆ. ಈ ವಿಶಾಲ ವಿಶ್ವದ ಒಂದು ಮೂಲೆಗೆ ನಾನು ಬಂಧಿತನಾಗಿದ್ದೇನೆ. ಬೇರೊಂದೆಡೆಯಲ್ಲಿ ನೆಲೆಗೊಳಿಸಲ್ಪಡುವುದರ ಬದಲಾಗಿ ಇಲ್ಲೇಕೆ ನೆಲೆಗೊಳಿಸಲ್ಪಟ್ಟಿರುವೆನೆಂಬುದನ್ನು ತಿಳಿಯಲಾರದವನಾಗಿದ್ದೇನೆ. ನನಗಿಂತ ಹಿಂದೆ ಇದ್ದ ಮತ್ತು ನನ್ನ ಅನಂತರ ಬರಲಿರುವ ಕಾಲದ ಅನಂತವ್ಯಾಪ್ತಿಯಲ್ಲಿ ನನಗೇಕೆ ಈ ವರ್ತಮಾನ ಮುಹೂರ್ತದ ಹ್ರಸ್ವಜೀವನವನ್ನು ನಿಗದಿಮಾಡಲಾಗಿದೆ ಎಂಬುದನ್ನು ಅರಿಯಲಾರದವನಾಗಿದ್ದೇನೆ. ನಾನು ಎಲ್ಲ ಕಡೆಗಳಲ್ಲಿಯೂ

ಅನಂತದ ಹೊರತಾಗಿ ಬೇರೇನನ್ನೂ ಕಾಣುತ್ತಿಲ್ಲ. ಪರಮಾಣುರೂಪದ ನನ್ನನ್ನು ಇದು ಆವರಿಸಿಕೊಂಡಿದೆ. ನಾನೊಂದು ನೆರಳು ಮಾತ್ರ—ನನ್ನ ಇರವು ಕ್ಷಣಿಕ, ಇನ್ನೆಂದೂ ಬರಲಾರೆ. ನನಗೆ ತಿಳಿದಿರುವುದೆಲ್ಲ ಇಷ್ಟು: ನಾನು ಸಾಯಲೇಬೇಕು; ಆದರೆ ನಾನೆಂದೂ ತಪ್ಪಿಸಿಕೊಳ್ಳಲಾಗದ ಈ ಸಾವಿನ ಬಗೆಗೇ ನನಗೆ ಗೊತ್ತಿರುವುದು ಅತ್ಯಲ್ಪ."

ಈ ಸಮಸ್ಯೆಗೆ ಉತ್ತರ ಮತಧರ್ಮದಲ್ಲಿ ಇರುವುದೆಂದು ಪಾಸ್ಕಲ್ ಕಂಡುಕೊಂಡಿದ್ದನಾದರೂ ತನಗೆ ಮಾತ್ರ ಆದರ ಅನುಭವವಾಗಿಲ್ಲವೆಂದು ಆ ವಿದ್ಯಾರ್ಥಿ ಬರೆದಿದ್ದ. ಬ್ರಹ್ಮಾಂಡಕ್ಕೆ ಹೋಲಿಸಿದಂತೆ ಮಾನವನ ಅಗಣನೀಯತೆಯ ಬಗೆಗೆ ವಿಸ್ತಾರವಾಗಿ ವಿವರಿಸುತ್ತ, ಹೀಗಿದ್ದರೂ ಸರಿದಾರಿ ಯಾವುದು ಏಕೆ ಎಂಬುದನ್ನು ತನಗೆ ತಿಳಿಯಹೇಳಬೇಕೆಂಬುದಾಗಿ ಅವನು ಐನ್‌ಸ್ಟೈನರನ್ನು ಕೇಳಿಕೊಂಡು "ನಾನು ಹಳಿ ತಪ್ಪಿರುವೆನೆಂದು ನಿಮಗೆ ಅನ್ನಿಸಿದರೆ ಕಡ್ಡಿ ಮುರಿದಂತೆ ಹಾಗೆ ಹೇಳಿಬಿಡಿ—ದಾಕ್ಷಿಣ್ಯ ಬೇಡ" ಎಂದು ಪ್ರಾರ್ಥಿಸಿದ.

ಕರುಳು ಕಿವುಚುವಂತಿದ್ದ ಈ ನೆರವು ಬೇಡಿಕೆಗೆ ಮಾರೋಲೆಯಾಗಿ ಐನ್‌ಸ್ಟೈನ್ ಯಾವುದೇ ಸುಲಭಶಾಮಕವನ್ನು ಒದಗಿಸಲಿಲ್ಲವೆಂಬ ಅಂಶವೇ ಆ ವಿದ್ಯಾರ್ಥಿಗೆ ಸಾಂತ್ವನದ ತನಿರಸವೆರೆದು ಅವನ ಸಂದೇಹಗಳ ಏಕಾಂಗಿತ್ವದ ಹೊರೆಯನ್ನು ಹಗುರಾಗಿಸಿರಬೇಕು. ಐನ್‌ಸ್ಟೈನರ ಅನುಕ್ರಿಯೆ ಇಲ್ಲಿದೆ. ಆ ಕಾಗದ ತಲಪಿದ ಮುಂದಿನ ಕೆಲವೇ ದಿನಗಳಲ್ಲಿ, ೧೯೫೦ ಡಿಸೆಂಬರ್ ೩ರಂದು, ಈ ಉತ್ತರವನ್ನು ಐನ್‌ಸ್ಟೈನ್ ಪ್ರಿನ್ಸ್‌ಟನ್ನಿನಿಂದ ಬರೆದಿದ್ದರು. ಭಾಷೆ ಇಂಗ್ಲಿಷ್:

● ವ್ಯಕ್ತಿಯು ಅಂತೆಯೇ ಒಟ್ಟಾರೆ ಮಾನವಸಮುದಾಯದ ಜೀವಸೋದ್ದೇಶವನ್ನು ಅರಸಲು ನೀವು ನಡೆಸುತ್ತಿರುವ ಹೋರಾಟದಲ್ಲಿ ನಿಮಗಿರುವ ಶ್ರದ್ಧೆಯನ್ನು ಮೆಚ್ಚುತ್ತೇನೆ. ನನ್ನ ಅಭಿಪ್ರಾಯದಲ್ಲಿ ಪ್ರಶ್ನೆಯನ್ನು ಈ ರೀತಿ ಕೇಳಿದ್ದಾದರೆ ಅದಕ್ಕೆ ಯಾವ ಸಮಂಜಸ ಉತ್ತರವೂ ದೊರೆಯದು. ಒಂದು ಕ್ರಿಯೆಯ ಉದ್ದೇಶ ಮತ್ತು ಗಮ್ಯದ ಬಗ್ಗೆ ನಮ್ಮ ಮನಸ್ಸಿನಲ್ಲಿರುವ ಅರ್ಥ ಸರಳವಾಗಿ ಈ ಮುಂದಿನ ಪ್ರಶ್ನೆ: ಆ ಕ್ರಿಯೆಯಿಂದ ಅಥವಾ ಅದರ ಪರಿಣಾಮಗಳಿಂದ ನಾವು ಯಾವ ಅಪೇಕ್ಷೆಯನ್ನು ಈಡೇರಿಸಬೇಕಾಗಿದೆ? ಅಥವಾ ಯಾವ ಅನಪೇಕ್ಷಿತ ಪರಿಣಾಮಗಳನ್ನು ನಿವಾರಿಸಬೇಕಾಗಿದೆ? ಒಂದು ಕ್ರಿಯೆಯ ಗಮ್ಯವನ್ನು ಕುರಿತಂತೆ ನಾವು ಆ ವ್ಯಕ್ತಿ ಸದಸ್ಯನಾಗಿರುವ ಒಂದು ಕೋಮಿನ ದೃಷ್ಟಿಕೋನದಿಂದ ಕೂಡ ಸ್ಪಷ್ಟವಾಗಿ

ಪ್ರಸ್ತಾವಿಸಬಹುದೆಂಬುದು ಕಂಡಂತೆಯೇ ಇದೆ. ಇಂಥ ಸನ್ನಿವೇಶಗಳಲ್ಲಿ ಆ ಕ್ರಿಯೆಯ ಗಮ್ಯ, ಕನಿಷ್ಠ ಪರೋಕ್ಷವಾಗಿಯಾದರೂ, ಸಮಾಜವನ್ನು ಸಂಯೋಗಿಸುವ ವ್ಯಕ್ತಿಗಳಿಗಿರುವ ಅಪೇಕ್ಷೆಗಳ ಈಡೇರಿಕೆಯ ಜೊತೆಗೆ ಕೂಡ ಸಂಬಂಧ ಹೊಂದಿದೆ.

ಒಟ್ಟಾಗಿ ಪರಿಗಣಿಸಿದಾಗ ಸಮಾಜದ ಇಲ್ಲವೇ ವ್ಯಕ್ತಿಯ ಉದ್ದೇಶ ಅಥವಾ ಗಮ್ಯ ಏನೆಂಬುದಾಗಿ ನೀವು ಕೇಳಿದ್ದಾದರೆ ಈ ಪ್ರಶ್ನೆ ಅರ್ಥಹೀನವಾಗುತ್ತದೆ. ಇನ್ನು ಸಮಗ್ರವಾಗಿ ನಿಸರ್ಗದ ಉದ್ದೇಶ ಅಥವಾ ಅರ್ಥ ಏನೆಂದು ಕೇಳಿದ್ದಾದರೆ ಈ ಪ್ರಶ್ನೆ ಇನ್ನಷ್ಟು ಅರ್ಥಹೀನವಾಗುತ್ತದೆಂಬುದು ಸ್ಪಷ್ಟ. ಏಕೆಂದರೆ ಇವೆಲ್ಲ ಸಂದರ್ಭಗಳಲ್ಲಿಯೂ ಈ ಘಟನೆಗಳಿಗೆ ಸಂಬಂಧಿಸಿದಂಥ ಅಪೇಕ್ಷೆಗಳಿರುವ ಒಬ್ಬಾತನನ್ನು ಕಲ್ಪಿಸಿಕೊಳ್ಳುವುದು ಕಾರಣರಹಿತವಲ್ಲವಾಗಿದ್ದರೆ ಪೂರ್ತಿ ಸ್ವೇಚ್ಛೆ ಆಗಿರುವುದಂತೂ ನಿಜ.

ಹೀಗಿದ್ದರೂ ನಮ್ಮ ಬದುಕನ್ನು ನಾವು ಹೇಗೆ ಬಾಳಲು ಪ್ರಯತ್ನಿಸಬೇಕು ಎಂಬ ಪ್ರಶ್ನೆಯನ್ನು ನಮಗೆ ನಾವೇ ಕೇಳಿಕೊಳ್ಳುವುದು ಸಕಾರಣೀಯವಾದದ್ದು ಮತ್ತು ಮುಖ್ಯವಾದದ್ದು ಎಂಬುದು ನಮಗೆಲ್ಲರಿಗೂ ಅನ್ನಿಸುತ್ತದೆ. ನನ್ನ ಅಭಿಪ್ರಾಯದಲ್ಲಿ ಉತ್ತರವಿದು : ಸಾಧ್ಯವಾಗುವಷ್ಟರ ಮಟ್ಟಿಗೆ ಸಕಲ ಜನರ ಅಪೇಕ್ಷೆ ಮತ್ತು ಆವಶ್ಯಕತೆಗಳ ಈಡೇರಿಕೆ ಮತ್ತು ಮಾನವಸಂಬಂಧಗಳಲ್ಲಿ ಸಾಂಗತ್ಯ ಮತ್ತು ಸೌಂದರ್ಯ ಸಂಪಾದನೆ. ಸಾಕಷ್ಟು ಪ್ರಜ್ಞಾಪೂರ್ವಕ ಚಿಂತನೆ ಮತ್ತು ಸ್ವಶಿಕ್ಷಣ ಇದ್ದಲ್ಲಿ ಮಾತ್ರ ಇವು ಕೈಗೂಡಬಹುದು ಅಷ್ಟೆ. ಜ್ಞಾನಿಗಳಾಗಿದ್ದ ಗ್ರೀಕರೂ ಪ್ರಾಚೀನ ಪೌರಸ್ತ್ಯ ಋಷಿಗಳೂ ಈ ಅತಿಮುಖ್ಯ ಕ್ಷೇತ್ರದಲ್ಲಿ ಇಂದು ನಮ್ಮ ಶಾಲೆ ಮತ್ತು ವಿಶ್ವವಿದ್ಯಾಲಯಗಳಲ್ಲಿ ಜೀವಂತವಾಗಿರುವುದಕ್ಕಿಂತ ಹೆಚ್ಚಿನ ಮಟ್ಟ ಐದಿದ್ದರೆಂಬುದು ನಿರಾಕರಿಸಲಾಗದ ಸತ್ಯ. ●

ಮನೋವಿಜ್ಞಾನದಲ್ಲಿ ಸ್ನಾತಕ ವಿದ್ಯಾರ್ಥಿ ಆಗಿದ್ದವನೊಬ್ಬ ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ಸುಂದರ ಪತ್ರವೊಂದನ್ನು ೧೯೫೧ ಆಕ್ಟೋಬರ್ ೨೮ರಂದು ಬರೆದು ಇವರ ಸಲಹೆ ಯಾಚಿಸಿದ. ಕರ್ಮಠ ಯೆಹೂದ್ಯ ತಂದೆ ತಾಯಿಯರ ಏಕಮಾತ್ರ ಪುತ್ರನಾಗಿದ್ದರೂ ಸ್ವತಃ ಈತ ಮಾತ್ರ ಕರ್ಮಠನಾಗಿರಲಿಲ್ಲ. ಬ್ಯಾಪ್ಟಿಸ್ಟ್ ಪಂಥದ ಒಬ್ಬ ಯುವತಿಯನ್ನು ಒಂದೂವರೆ ವರ್ಷದಷ್ಟು ಹಿಂದಿನಿಂದಲೂ ಗಾಢವಾಗಿ ಪ್ರೇಮಿಸುತ್ತಿದ್ದ. ಸಂಕರವಿವಾಹ

ಎದುರೊಡ್ಡುವ ಗುಂಡಿ ಗುಳುಪುಗಳನ್ನೂ ಇತರರ ಲಘು ಮಾತುಗಳು ಕುತ್ತುವ ಅನುದ್ದೇಶಿತ ನೋವು ಗಾಯಗಳನ್ನೂ ಈತ ಅರಿತಿದ್ದ. ಈ ಜೋಡಿ ತಮ್ಮ ಸ್ನೇಹಿತರ ಹಾಗೂ ಪರಿಚಿತರ ಜೊತೆ ಸಾಮಾಜಿಕವಾಗಿ ಬೆರೆತು ವ್ಯವಹರಿಸಿ ಆಗ ಎದುರಾಗುತ್ತಿದ್ದ ಒತ್ತಡ ದುಗುಡ ದುಮ್ಮಾನಗಳನ್ನು ಅಡ್ಡ ಹಾಯಬಲ್ಲಷ್ಟು ಗಾಢವಾಗಿದೆ ತಮ್ಮ ಅನುರಾಗ ಎಂಬುದನ್ನು ಕಂಡುಕೊಂಡಿತು ಮುಂದೆ ತಮ್ಮ ಮಕ್ಕಳಿಗೆ ಹೆಚ್ಚು ಸಮತೂಕದ ಕುಟುಂಬ ಜೀವನ ಒದಗಲಿ ಎಂಬ ಉದ್ದೇಶದಿಂದ ಆ ಯುವತಿ, ಸ್ವಂತೇಚ್ಛೆಯಿಂದ, ಜ್ಯೂಡಾಯಿಸಮ್ಮಿಗೆ'[6] ಮತಾಂತರ ಹೊಂದಲು ಒಪ್ಪಿಗೆ ವ್ಯಕ್ತಪಡಿಸಿದ್ದಳು. ಯುವಕನ ತಂದೆ ತಾಯಿಯರು ಆ ಹುಡುಗಿಯನ್ನು ಮೆಚ್ಚಿದ್ದರೂ ಸಂಕರ ವಿವಾಹದ ಬಗೆಗೆ ಭಯತಳೆದವರಾಗಿ ತಮ್ಮ ಅಭ್ಯಂತರಗಳನ್ನು ಖಚಿತವಾಗಿ ಸ್ಪಷ್ಟೀಕರಿಸಿದ್ದರು. ತರುಣಿಯ ಬಗೆಗಿನ ಪ್ರೇಮ ಒಂದು ಕಡೆ, ತಂದೆತಾಯಿಯರನ್ನು ಉಪೇಕ್ಷಿಸಿ ಅವರಿಗೆ ಶಾಶ್ವತ ವೇದನೆ ಉಂಟುಮಾಡಬಾರದೆಂಬ ಅಪೇಕ್ಷೆ ಇನ್ನೊಂದು ಕಡೆ—ಇವೆರಡು ವಿರುದ್ಧ ಬಲಗಳಿಂದ ತಾಡಿತನಾಗಿದ್ದ ಆ ತರುಣ ಐನ್‌ಸ್ಟೈನರನ್ನು ಕೇಳಿದ: ಒಬ್ಬಾತ ಹೊಸಪರಿಯ ಬಾಳಿಗೆ ಕಾಲಿಡಲು ಹಂಬಲಿಸುತ್ತಿರುವಾಗ ಆದ್ಯತೆ ಶ್ರೇಣಿಯಲ್ಲಿ ತಂದೆತಾಯಿಯರಿಗಿಂತ ಮೊದಲು ಹೆಂಡತಿಗೆ ಸ್ಥಾನ ಸಲ್ಲಬೇಕೆಂದು ನಂಬುವುದು ಸರಿಯಾದ ಕ್ರಮವಲ್ಲವೆ? ಇದಕ್ಕೆ ಐನ್‌ಸ್ಟೈನ್ ಕರಡು ಉತ್ತರವನ್ನು ಆತನ ಕಾಗದದ ಹಿಂಬದಿಯಲ್ಲಿ ಬರೆದರು. ಮಾರ್ಶೋಲೆ ಪ್ರಾಯಶಃ ಇಂಗ್ಲಿಷಿನಲ್ಲಿ ಹೋಗಿರಲು ಸಾಕು. ಆದರೆ ಐನ್‌ಸ್ಟೈನ್ ಪತ್ರಾಗಾರದಲ್ಲಿ ಜರ್ಮನ್ ಕರಡು ದೊರೆತಿದೆ ಅಷ್ಟೆ. ಅದರ ಅನುವಾದ:

● ತಮ್ಮ ಮಕ್ಕಳ ಬದುಕಿನ ಸ್ವರೂಪವನ್ನೇ ಬದಲಾಯಿಸಬಲ್ಲ ನಿರ್ಧಾರಗಳ ಮೇಲೆ ತಂದೆತಾಯಿಯರು ಪ್ರಭಾವ ಬೀರುವುದನ್ನು ನಾನು ಸ್ವಾಗತಿಸಲಾರೆ. ಇದು ನನ್ನ ಪ್ರಾಮಾಣಿಕ ಅನ್ನಿಸಿಕೆ. ಇಂಥ ಸಮಸ್ಯೆಗಳನ್ನು ಒಬ್ಬಾತ ಖುದ್ದು ತಾನೇ ಪರಿಹರಿಸಬೇಕಾಗುತ್ತದೆ.

ಈಗ, ನಿಮ್ಮ ತಂದೆತಾಯಿಯರಿಗೆ ಪ್ರಿಯವಲ್ಲದ ಒಂದು ನಿರ್ಧಾರವನ್ನು ನೀವು ತಳೆಯಬೇಕಾಗಿದ್ದಲ್ಲಿ ನಿಮಗೆ ನೀವೇ ಈ ಪ್ರಶ್ನೆ ಹಾಕಿಕೊಳ್ಳಬೇಕು: ನಾನು ನನ್ನ ಆಂತರಿಕ ಸಮತೋಲನವನ್ನು ಕಳೆದುಕೊಳ್ಳದೆ ನನ್ನ ತಂದೆ ತಾಯಿಯರ ಇಚ್ಛೆಗಳಿಗೆ ವಿರೋಧವಾಗಿ ವರ್ತಿಸಬಲ್ಲಷ್ಟು ದೃಢ ಮತ್ತು ಸ್ವತಂತ್ರ ಮನೋಭಾವವುಳ್ಳವನೇ? ಇದಕ್ಕೆ ನೀವು ಗಟ್ಟಿ ಉತ್ತರ ಕೊಡಲಾರದವರಾಗಿದ್ದರೆ, ನೀವು ಮುಂದಿಡಬೇಕೆಂದಿರುವ ಹೆಜ್ಜೆ ಆ ಹುಡುಗಿಯ

ಹಿತದೃಷ್ಟಿಯಿಂದ ಕೂಡ ಅನಪೇಕ್ಷಣೀಯ. ಇದೊಂದರ ಮೇಲೆಯೇ ನಿಮ್ಮ ನಿರ್ಧಾರ ನಿಂತಿರಬೇಕಾಗಿದೆ. ●

ಬ್ರೌನ್ ವಿಶ್ವವಿದ್ಯಾಲಯದಲ್ಲಿ ತತ್ತ್ವಶಾಸ್ತ್ರವನ್ನು ಪ್ರಧಾನ ವಿಷಯವಾಗಿ ಆಯ್ದುಕೊಂಡು ಅಧ್ಯಯನ ಮಾಡುತ್ತಿದ್ದ ಇಪ್ಪತ್ತು ವರ್ಷ ವಯಸ್ಸಿನ ಒಬ್ಬ ವಿದ್ಯಾರ್ಥಿ ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ, ೧೯೫೦ ಡಿಸೆಂಬರ್ ೮ರಂದು ಸಾಕಷ್ಟು ದೀರ್ಘವಾದ ಮತ್ತು ಉತ್ಸಾಹ ತುಂಬಿತುಳುಕುತ್ತಿದ್ದ ಒಂದು ಕಾಗದ ಬರೆದ. ಅದು ಪೂರ್ತಿ ಕೈಬರೆಹದಲ್ಲಿತ್ತು. ತನ್ನ ನೆನಪು ಸರಿಯಬಲ್ಲಷ್ಟು ಹಿಂದಿನಿಂದಲೂ ತಾನೊಬ್ಬ ಇವರ ಅಸೀಮ ಅಭಿಮಾನಿ, ಇವರಿಗೆ ಸಂಬಂಧಿಸಿದ ಸಮಸ್ತ ವಿಷಯಗಳೂ—ಇವರ ಸಿದ್ಧಾಂತಗಳು, ಅಭಿಪ್ರಾಯಗಳು, ವ್ಯಕ್ತಿತ್ವ—ತನಗೆ ವರ್ಣನಾತೀತವೆನಿಸುವಷ್ಟು ಪ್ರಿಯ ವಾಗಿದ್ದುವು. ತನಗೊಂದು ಸಂಕ್ಷಿಪ್ತ ಟೀಕು ಬರೆದು ಕಳಿಸುವಷ್ಟು ಕಾಲಾವ ಕಾಶ ಐನ್‌ಸ್ಟೈನರಿಗೆ ದೊರೆತೀತೇ ಎಂಬುದಾಗಿ ಆತ ಅರಿಕೆ ಸಲ್ಲಿಸಿದ್ದ. ತಾನು ಇವರಿಗೆ ಅಪರಿಚಿತನಾಗಿದ್ದುದರಿಂದ ಆದರಲ್ಲಿ ವೈಯಕ್ತಿಕ ಸಂದೇಶ ವೇನೂ ಇರುವುದು ಸಾಧ್ಯವಾಗದು. ಇಷ್ಟಿದ್ದರೂ ಆ ಟೀಕುವಿನಲ್ಲಿ ವಿಶಿಷ್ಟ ವಾದ ಒಂದು ಸಂದೇಶ ಅಥವಾ ಸಲಹೆ ಇದ್ದೀತೆಂಬುದಾಗಿ ಆ ವಿದ್ಯಾರ್ಥಿ ಆಶಿಸಿದ್ದ.

೧೯೫೦ ಡಿಸೆಂಬರ್ ೯ರಂದು ಐನ್‌ಸ್ಟೈನ್ ಇಂಗ್ಲಿಷಿನಲ್ಲಿ ಈ ಮುಂದಿನಂತೆ ಮಾರೋಲೆ ಬರೆದರು :

● ಋತದ ಒಂದಿಷ್ಟು ತುಣುಕನ್ನು ಗ್ರಹಿಸುವ ದಿಶೆಯಲ್ಲಿ ಜೀವಮಾನ ವಿಡೀ ಶ್ರಮಿಸಿದ ಒಬ್ಬಾತನಿಗೆ ದೊರೆಯಬಹುದಾದ ಅತ್ಯಂತ ಸಂತೃಪ್ತಿ ದಾಯಕ ಬಹುಮಾನವೆಂದರೆ ಇತರ ಜನ ಆತನ ಕಾರ್ಯವನ್ನು ಸರಿಯಾಗಿ ಅರ್ಥವಿಸಿದ್ದಾರೆ ಹಾಗೂ ಅದರಲ್ಲಿ ಸಂತೋಷಪಡೆದಿದ್ದಾರೆ ಎಂದು ತಿಳಿಯು ವುದು. ನಿಮ್ಮ ಒಲವಿನ ನುಡಿಗಳಿಗಾಗಿ ಕೃತಜ್ಞನಾಗಿದ್ದೇನೆ. ಬಿಡುವೇಳೆ ಲವಲೇಶವೂ ಇಲ್ಲದಿರುವುದರಿಂದ ಬಲು ಪುಟ್ಟ ಟೀಕೊಂದನ್ನು ಮಾತ್ರ ಬರೆದು ತೃಪ್ತನಾಗಬೇಕಾಗಿದೆ.

ಅನುಭವಜನ್ಯ ಜ್ಞಾನದ ಆಧಾರವಿಲ್ಲದೆ ಸತ್ಯದ ಗ್ರಹಿಕೆ ಸಾಧ್ಯವಾಗ ದೆಂಬುದು ನಿಜ. ಆದರೆ ನಾವು ಇನ್ನಷ್ಟು ಆಳಹೊಕ್ಕು ನಮ್ಮ ಸಿದ್ಧಾಂತ ಗಳು ಅಧಿಕ ವಿಸ್ತಾರ ಮತ್ತು ಪರಿವ್ಯಾಪ್ತಿ ಗಳಿಸಿದಂತೆಲ್ಲ ಆ ಸಿದ್ಧಾಂತ ಗಳನ್ನು ನಿರ್ಧರಿಸಲು ಕಡಿಮೆ ಅನುಭವಜನ್ಯಜ್ಞಾನ ಸಾಕಾಗುತ್ತದೆ.

ಬರ್ಲಿನ್ ನಕ್ಷತ್ರಮಂದಿರದಲ್ಲಿ ಐನ್‌ಸ್ಟೈನ್ ೧೯೩೧ ಅಕ್ಟೋಬರ್ ೪ ರಂದು ಒಂದು ಉಪನ್ಯಾಸವಿತ್ತರು. ಅದಕ್ಕೆ ಹಾಜರಾಗಲು ಸಾಧ್ಯವಾಗ ದಿದ್ದ ಒಬ್ಬ ಪತ್ರಿಕಾಕರ್ತ ಆ ಉಪನ್ಯಾಸದ ವರದಿಯನ್ನು ಮರುದಿನ ಪತ್ರಿಕೆಗಳಲ್ಲಿ ಓದಿ ಆ ಅಂಶವನ್ನಷ್ಟನ್ನೇ ಕತ್ತರಿಸಿ ಅದನ್ನು ಐನ್‌ಸ್ಟೈನರಿಗೆ ಕಳಿ ಸಿದ. ಉಪನ್ಯಾಸದಲ್ಲಿ ಐನ್‌ಸ್ಟೈನ್ ಏನು ಹೇಳಿದ್ದರೆಂಬುದರ ವರದಿ ಇದು :

● ಕೇವಲ ದಾಖಲೆ ಮಾಡಲಾದ ವಿದ್ಯಮಾನಗಳ ಪರಿಚಯ ಯಾವುದೇ ಸಿದ್ಧಾಂತದ ಸೃಷ್ಟಿಗೆ ಎಂದೂ ಸಾಕಾಗದು—ವಿಷಯದ ಹೃದಯವನ್ನೇ ಪ್ರವೇಶಿಸಬಲ್ಲ ಮಾನವಬುದ್ಧಿಯ ಮುಕ್ತ ಉಪಜ್ಞೆ ಸದಾ ಇದ್ದೇ ತೀರ ಬೇಕು. ಅಲ್ಲದೇ, ಭೌತವಿಜ್ಞಾನಿ ಈ ವಿದ್ಯಮಾನಗಳನ್ನು ಕುರಿತಂತೆ ವಿದ್ಯ ಮಾನವೈಜ್ಞಾನಿಕ[17] ಪರಿಗಣನೆಗಳಿಂದ ಮಾತ್ರವೇ ತೃಪ್ತನಾಗಬಾರದು, ಬದಲು,ಅವುಗಳ ಅಂತರ್ಗತ ರೂಪಿಕೆಯನ್ನು ಶೋಧಿಸುವ ಊಹನಾತ್ಮಕ ವಿಧಾನವನ್ನು ದೃಢವಾಗಿ ಅವಲಂಬಿಸಲೇಬೇಕು.●

ಬರ್ಲಿನ್ ಸಮೀಪದ ಕಾಪುತ್ ಗ್ರಾಮದಲ್ಲಿ ಐನ್‌ಸ್ಟೈನ್ ದಂಪತಿಗಳ ಬೇಸಗೆ ಬಿಡಾರವಿತ್ತು.[18] ಇವರಿಗೆ ಅತಿಪ್ರಿಯವಾದ ನಿವಾಸವಿದು. ಭವಿಷ್ಯ ದಲ್ಲಿ ನಾಟ್ಸಿಗಳು ಇದನ್ನು ಮುಟ್ಟುಗೋಲುಹಾಕಿ ವಶಪಡಿಸಿಕೊಳ್ಳುವವ ರಿದ್ದರು. ಬರಲಿದ್ದ ದುರ್ಘಟನೆಗಳ ಕರಾಳಛಾಯೆ ೧೯೩೨ರ ದಿನಗಳಂದೇ ಕವಿದಿತ್ತು. ಕಾಪುತ್‌ನಲ್ಲಿ ಇವರ ನೆರೆಮನೆಯವರೊಬ್ಬರ ಮಗಳು ಒಂದು ಆಲ್ಬಮನ್ನು ಇಟ್ಟುಕೊಂಡಿದ್ದಳು.ಐನ್‌ಸ್ಟೈನ್ ಅದರಲ್ಲೇನಾದರೂ ಬರೆಯ ಬೇಕೆಂಬುದು ಅವಳ ಅಪೇಕ್ಷೆ. ೧೯೩೨ರಲ್ಲಿ ಐನ್‌ಸ್ಟೈನ್ ಬರೆದ ನುಡಿಗಳು:

● ಅಯ್ಯಾ ಯೌವನವೇ! ಸೌಂದರ್ಯ ಮತ್ತು ಸ್ವಾತಂತ್ರ್ಯಸಹಿತ ವಾದ ಜೀವನಕ್ಕಾಗಿ ಹಾತೊರೆದ ಮೊದಲ ತಲೆಮಾರು ನಿನ್ನದಲ್ಲವೆಂಬುದು ನಿನಗೆ ಗೊತ್ತೇ? ನಿನ್ನ ಎಲ್ಲ ಪೂರ್ವಜರೂ ನಿನ್ನಂತೆಯೇ ಭಾವಿಸಿದ್ದ ರೆಂಬುದೂ, ಮತ್ತು ಆ ಕಾರಣಕ್ಕಾಗಿ, ಕಷ್ಟ ಮತ್ತು ದ್ವೇಷಗಳಿಗೆ ಬಲಿ ಆಗಿದ್ದರೆಂಬುದೂ ನಿನಗೆ ಗೊತ್ತೇ?

ನೀನು ಮನುಷ್ಯರನ್ನು, ಪ್ರಾಣಿಗಳನ್ನು ಮತ್ತು ಸಸ್ಯಗಳನ್ನು, ಮತ್ತು ನಕ್ಷತ್ರಗಳನ್ನು ಕುರಿತ ನಲ್ಮೆ ಮತ್ತು ತಿಳಿವಳಿಕೆ ಗಳಿಸಲು ಯಶಸ್ವಿಯಾಗಿ, ಜಗತ್ತಿನ ಪ್ರತಿಯೊಂದು ನಲಿವೂ ನಿನ್ನ ನಲಿವಾದಾಗ, ಮತ್ತು ಪ್ರತಿ ಯೊಂದು ನೋವೂ ನಿನ್ನ ನೋವಾದಾಗ ಮಾತ್ರ ನಿನ್ನ ಉತ್ಕಟೇಚ್ಛೆಗಳು

ಪೂರೈಕೆಗೊಳ್ಳಬಲ್ಲವು ಎಂಬುದು ಕೂಡ ನಿನಗೆ ಗೊತ್ತೇ? ತೆರೆ ನಿನ್ನ ಕಣ್ಣುಗಳನ್ನು, ಬಿಚ್ಚು ನಿನ್ನ ಹೃದಯವನ್ನು, ಚಾಚು ನಿನ್ನ ಸ್ನೇಹಹಸ್ತವನ್ನು ಮತ್ತು ದೂರವಿಡು ನಿನ್ನ ಪೂರ್ವಜರು ಇತಿಹಾಸದಿಂದ ಕಡುದಾಹಿಗಳಂತೆ ಹೀರಿಕೊಂಡ ನಂಜನ್ನು. ಆಗ ಮಾತ್ರ ಸಮಸ್ತ ಭೂಮಂಡಲವೂ ನಿನ್ನ ಪಿತೃಭೂಮಿ ಆದೀತು, ನಿನ್ನ ಕಾರ್ಯ ಮತ್ತು ಪ್ರಯತ್ನ ಶ್ರೇಯಸ್ಸನ್ನು ಪಸರಿಸಿಯಾವು. ●

ಮನುಷ್ಯರನ್ನು ಪ್ರಾಣಿಪ್ರಪಂಚದ ಸದಸ್ಯರು ಎಂಬುದಾಗಿ ವರ್ಗೀಕರಿಸಲಾಗಿದೆ ಎಂಬ ಮಾಹಿತಿ ತನ್ನ ಹೆಚ್ಚಿನ ವಿದ್ಯಾರ್ಥಿಗಳಿಗೆ ಆಘಾತವಾಗಿ ಬಡಿದಿತ್ತೆಂಬುದನ್ನು ಓಹಿಯೋದಲ್ಲಿ ಐದನೆಯ ತರಗತಿಗೆ ಪಾಠ ಮಾಡುತ್ತಿದ್ದ ಒಬ್ಬ ಉಪಾಧ್ಯಾಯ ಕಂಡುಕೊಂಡ. ಇದರ ಬಗೆಗೆ ಪ್ರಪಂಚದ ಮಹಾಮತಿಗಳ ಅಭಿಪ್ರಾಯಸಂಗ್ರಹಕ್ಕೋಸ್ಕರ ಆ ವಿದ್ಯಾರ್ಥಿಗಳು ಕಾಗದ ಬರೆದು ತನಗೆ ಕೊಡಬೇಕೆಂದು ಅವರನ್ನು ಆತ ಒಪ್ಪಿಸಿದ. ಆಯ್ದ ಕೆಲವು ಕಾಗದಗಳ ಒಂದು ಕಟ್ಟನ್ನು ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ೧೯೫೨ ನವೆಂಬರ್ ೨೬ರಂದು ಕಳಿಸಿದ; ಮತ್ತು ಅವರು ಇದಕ್ಕೆ ಮಾರೋಲೆ ಬರೆಯಲು ಒಂದಿಷ್ಟು ವೇಳೆ ಹೊಂದಿಸಿಕೊಂಡಾರೆಂದು ಆಶಿಸಿದ. ಐನ್‌ಸ್ಟೈನ್ ಆತನ ಇಚ್ಛೆಯನ್ನು ಪೂರೈಸಿದರು. ೧೯೫೩ ಜನವರಿ ೧೭ರಂದು (ಇಂಗ್ಲಿಷಿನಲ್ಲಿ) ಬರೆದರು :

● ಪ್ರಿಯ ಪುಟಾಣಿಗಳೇ

‘ಪ್ರಾಣಿ ಯಾವುದು?’ ಎಂದಲ್ಲ, ಬದಲು ‘ಯಾವ ತೆರನಾದ ವಸ್ತುವನ್ನು ಪ್ರಾಣಿ ಎನ್ನುತ್ತೇವೆ?’ ಎಂದು ಪ್ರಶ್ನೆ ಹಾಕಬೇಕು. ಈಗ, ಕೆಲವೊಂದು ವಿಶಿಷ್ಟ ಲಕ್ಷಣಗಳಿರುವ ಯಾವುದೋ ಒಂದನ್ನು ಪ್ರಾಣಿ ಎನ್ನುತ್ತೇವೆ: ಅದು ಆಹಾರ ಸೇವಿಸುತ್ತದೆ, ತನಗೆ ಸದೃಶವಾದ ಜನ್ಮದಾತರಿಂದ ಜನಿಸುತ್ತದೆ, ಬೆಳೆಯುತ್ತದೆ, ತನ್ನಷ್ಟಕ್ಕೆ ತಾನೇ ಚಲಿಸುತ್ತದೆ. ಆಯುಷ್ಯ ಸಂದುಹೋದಾಗ ಸಾಯುತ್ತದೆ. ಈ ಕಾರಣಕ್ಕಾಗಿಯೇ ಹುಳು, ಕೋಳಿಮರಿ, ನಾಯಿ, ಕಪಿ ಮುಂತಾದವನ್ನು ಪ್ರಾಣಿ ಎಂದು ಕರೆಯುವುದಾಗಿದೆ. ಹಾಗಾದರೆ ನಾವು ಮನುಷ್ಯರು? ಈ ಪ್ರಶ್ನೆಗೆ ಮೇಲೆ ಹೇಳಿರುವ ಧಾಟಿಯಲ್ಲಿ ಯೋಚಿಸಿದ ಬಳಿಕ, ನಮ್ಮನ್ನು ಪ್ರಾಣಿಗಳೆಂದು ಪರಿಭಾವಿಸುವುದು ಯುಕ್ತವಾಗಿದೆಯೇ ಎಂಬುದನ್ನು ಸ್ವತಃ ನೀವೇ ನಿರ್ಧರಿಸಿ. ●

ಇಂಗ್ಲೆಂಡಿನ ಒಂದು ಗ್ರಾಮರ್ ಶಾಲೆಯ 'ಸಿಕ್ಸ್ತ್ ಫಾರ್ಮ್ ಸೊಸೈಟಿ'ಯ ಪ್ರತಿನಿಧಿಗಳು ೧೯೫೨ ಫೆಬ್ರುವರಿ ೨೫ರಂದು ಐನ್‌ಸ್ಟೈನರಿಗೊಂದು ಕಾಗದ ಬರೆದು ಇವರನ್ನು ತಮ್ಮ ಸಂಘದ ಅಧ್ಯಕ್ಷ ಪದವಿಗೆ ಸರ್ವಾನುಮತದಿಂದ ಚುನಾಯಿಸಲಾಗಿದೆಯೆಂದು ಸಂಭ್ರಮೋತ್ಸಾಹದಿಂದ ಅರುಹಿದರು. ಈ ಸ್ಥಾನಕ್ಕೆ ನಿಗದಿಯಾದ ಕರ್ತವ್ಯವೇನೂ ಇರಲಿಲ್ಲವೆಂಬುದು ಸ್ಪಷ್ಟ. ಇಷ್ಟೇ ಅಲ್ಲ. ಚಾಲ್ತಿ ಉಪನಿಬಂಧನೆಗಳ ಪ್ರಕಾರ ಸಂಘ ಒಬ್ಬ ಅಧ್ಯಕ್ಷನನ್ನು ಹೊಂದಿರಲು ಹೇಗೂ ಅವಕಾಶವಿರಲಿಲ್ಲ. ಆದರೆ ವಿದ್ಯಾರ್ಥಿಗಳ ಸದ್ಭಾವನೆಯನ್ನು ಐನ್‌ಸ್ಟೈನ್ ಆ ವಿದ್ಯಾರ್ಥಿಗಳಿಗೆ ಇವರ ಕೃತಿಯ ಬಗ್ಗೆ ಇರುವ ಅಭಿಮಾನದ ಕುರುಹೆಂಬುದಾಗಿ ಮೆಚ್ಚಬಹುದೆಂದು ಅವರು ಆಶಿಸಿದ್ದರು.

೧೯೫೨ ಮಾರ್ಚ್ ೧೭ರಂದು ಐನ್‌ಸ್ಟೈನ್, ಇಂಗ್ಲಿಷಿನಲ್ಲಿ, ಈ ಮುಂದಿನಂತೆ ಬರೆದರು

● ನಿಮ್ಮ ಸೊಸೈಟಿಯ ಅಧ್ಯಕ್ಷ ಪದವಿಗೆ ಮಾಡಲಾದ ಈ ನಾಮಕರಣವನ್ನು ಹಳೆಯ ಒಬ್ಬ ಶಾಲಾಧ್ಯಾಪಕನಾಗಿ ಅಧಿಕ ಸಂತೋಷ ಸಂಭ್ರಮಗಳಿಂದ ಸ್ವಾಗತಿಸಿದ್ದೇನೆ. ನಾನೊಬ್ಬ ಅಲೆಮಾರಿ ಮುದುಕ. ಆದರೆ ಗೌರವಾನ್ವಿತತೆಯತ್ತ ಮಾಲಬಲ್ಲ ಪ್ರವೃತ್ತಿ ವೃದ್ಧಾಪ್ಯದೊಳಗೆ ಹುದುಗಿದೆ—ನನ್ನನ್ನು ಕುರಿತಂತೆಯೂ !—ಎಂಬುದು ಸರಿಯಷ್ಟೆ. ಆದರೆ ನಿಮಗೊಂದು ಸಂಗತಿ ತಿಳಿಸಬೇಕು ; ನನ್ನ ಒಪ್ಪಿಗೆ ಪಡೆಯದೆ ಈ ನಾಮಕರಣ ಮಾಡಲಾಗಿದೆ ಎಂಬ ಅಂಶ ನನ್ನನ್ನು ಕೊಂಚ (ಆದರೆ ಹೆಚ್ಚೇನೂ ಅಲ್ಲ) ಕಕ್ಕಾಬಿಕ್ಕಿ ಮಾಡಿದೆ.●

ಐನ್‌ಸ್ಟೈನರ ಈ ಕಾಗದಕ್ಕೆ ಚೌಕಟ್ಟುಹಾಕಿ 'ಸಿಕ್ಸ್ತ್ ಫಾರ್ಮ್ ಸೊಸೈಟಿ' ಸಭೆ ಸೇರುತ್ತಿದ್ದ ಶಾಲಾಗ್ರಂಥಭಂಡಾರದಲ್ಲಿ ಇಡಲಾಯಿತು. ಪ್ರಾಯಶಃ ಅದು ಇಂದೂ ಅಲ್ಲಿಯೇ ಇರಬಹುದು.

ನ್ಯೂಯಾರ್ಕ್ ನಗರದಲ್ಲಿ ಒಂದು ಸಂಡೇ ಸ್ಕೂಲಿನ ಆರನೆಯ ತರಗತಿಯಲ್ಲಿದ್ದ ಒಬ್ಬಳು ಹೆಣ್ಣುಮಗು ತನ್ನ ಶಿಕ್ಷಿಕೆಯ ಪ್ರೋತ್ಸಾಹದ ಮೇರೆಗೆ, ಆಗ ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ೧೯೩೬ ಜನವರಿ ೧೯ರಂದು ಒಂದು ಕಾಗದ ಬರೆದು ವಿಜ್ಞಾನಿಗಳು ಪ್ರಾರ್ಥನೆ ಸಲ್ಲಿಸುವರೇ, ಮತ್ತು ಸಲ್ಲಿಸುವುದಾದಲ್ಲಿ ಯಾವುದನ್ನು ಕುರಿತು ಸಲ್ಲಿಸುವರು ಎಂಬುದಾಗಿ ಕೇಳಿದಳು.

ಐನ್‌ಸ್ಟೈನ್ ೧೯೩೬ ಜನವರಿ ೨೪ರಂದು ಮಾರೋಲೆ ಬರೆದರು :

● ನಿನ್ನ ಪ್ರಶ್ನೆಗೆ ನನ್ನ ಅನ್ನಿಸಿಕೆಗಳನ್ನು ಸಾಧ್ಯವಾದಷ್ಟೂ ಸರಳವಾಗಿ ಬರೆಯಲು ಪ್ರಯತ್ನಿಸಿದ್ದೇನೆ. ಇಲ್ಲಿದೆ ನನ್ನ ಉತ್ತರ.

ಪ್ರತಿಯೊಂದು ಘಟನೆಯೂ ನಿಸರ್ಗ ನಿಯಮಗಳಿಂದ ನಿರ್ಧರಿತವಾಗಿರುವುದೆಂಬ ಭಾವನೆಯನ್ನು ಆಧರಿಸಿ ವೈಜ್ಞಾನಿಕ ಸಂಶೋಧನೆ ನಿಂತಿದೆ. ಎಂದೇ ಇದು ಮನುಷ್ಯ ವರ್ತನೆಗಳನ್ನು ಕುರಿತು ಕೂಡ ಅಷ್ಟೇ ನಿಜವಾಗಿದೆ. ಪರಿಸ್ಥಿತಿ ಹೀಗಿರುವಾಗ, ಪ್ರಾರ್ಥನೆ ಸಲ್ಲಿಸಿ—ಪರಾತ್ಪರ ವಸ್ತುವೊಂದಕ್ಕೆ ನಮ್ಮ ಇಚ್ಛೆಯನ್ನು ನಿವೇದಿಸಿ—ಘಟನೆಗಳ ಮೇಲೆ ಪ್ರಭಾವ ಬೀರಬಹುದು ಎಂಬುದನ್ನು ಒಬ್ಬ ಸಂಶೋಧಕ ವಿಜ್ಞಾನಿ ಗಂಭೀರವಾಗಿ ಏನೂ ಪರಿಗಣಿಸಲಾರ. ●

ಆದರೆ ಈ ನಿಯಮಗಳನ್ನು ಕುರಿತ ನಮ್ಮ ವಾಸ್ತವಜ್ಞಾನ ಕೇವಲ ಅಪರಿಪೂರ್ಣ ಮತ್ತು ಆಂಶಿಕ ಎಂಬುದನ್ನು ಒಪ್ಪಿಕೊಳ್ಳಲೇಬೇಕು. ಹೀಗಾಗಿ, ವಸ್ತುತಃ, ಮೂಲಾಧಾರವಾದ ಸರ್ವಪರಿಗ್ರಾಹಿ ನಿಸರ್ಗ ನಿಯಮಗಳ ಅಸ್ತಿತ್ವದ ಬಗೆಗಿನ ವಿಶ್ವಾಸವಾದರೂ ಒಂದು ತರಹದ ಭರವಸೆಯ ಮೇಲೆಯೇ ನೆಲಸಿರುವುದಾಗಿದೆ. ಇಂತಿದ್ದರೂ ವೈಜ್ಞಾನಿಕ ಸಂಶೋಧನೆಗೆ ಈ ತನಕ ಒದಗಿರುವ ಯಶಸ್ಸು ಈ ಭರವಸೆಯನ್ನು ಬಲು ಮಟ್ಟಿಗೆ ಸಮರ್ಥಿಸಿದೆ.

ಇತ್ತ ವಿಜ್ಞಾನದ ಅನ್ವೇಷಣೆಯಲ್ಲಿ ಗಾಢವಾಗಿ ಮಗ್ನನಾಗಿರುವ ಪ್ರತಿಯೊಬ್ಬನಿಗೂ ವಿಶ್ವದ ನಿಯಮಗಳ ಹಿಂದೆ ಒಂದು ಚೇತನ ಸ್ಪಂದಿಸುತ್ತಿದೆಯೆಂಬ ಭಾವ ದೃಢಪಡುತ್ತದೆ. ಅದೆಂಥ ಚೇತನ? ಮಾನವನದ್ದಕ್ಕಿಂತ ಅದೆಷ್ಟೊ ಅಧಿಕತ್ರಾಣಿ ಚೇತನ! ತೀರ ಪರಿಮಿತ ಸಾಮರ್ಥ್ಯವಂತರಾದ ನಾವು ಮನುಷ್ಯರು ಅದರ ಸಾನ್ನಿಧ್ಯದಲ್ಲಿ ವಿನೀತರಾಗುವುದೊಂದೇ. ಶರಣು. ಹೀಗೆ ವಿಜ್ಞಾನದ ಅನ್ವೇಷಣೆ ವಿಶಿಷ್ಟ ಬಗೆಯ ಒಂದು ಧಾರ್ಮಿಕ ಭಾವನೆಯತ್ತ ನಮ್ಮನ್ನು ಒಯ್ಯುತ್ತದೆ. ಈ ಭಾವನೆ ಮುಗ್ಧವ್ಯಕ್ತಿಯೊಬ್ಬನ ಧಾರ್ಮಿಕ ಶ್ರದ್ಧೆಗಿಂತ ಪೂರ್ತಿ ಬೇರೆಯೇ ಆದದ್ದು. ●

ಹೈಸೆನ್‌ಬರ್ಗ್[20] ಅವರ ಅನಿರ್ಧರಣೀಯತಾತತ್ತ್ವ,[21] ಮತ್ತು ಶಕಲ ಬಲವಿಜ್ಞಾನದ[22] ಪ್ರಕಾರ ನಿಷ್ಕೃಷ್ಟ ನಿರ್ಧರಣೆಯನ್ನು ನಿರಾಕರಿಸುವ ಸಂಭಾವ್ಯತಾವ್ಯಾಖ್ಯಾನ[23] ಪ್ರಕಟಗೊಂಡು ಒಂದು ದಶಕ ಸಂದ ಬಳಿಕ ಈ ಕಾಗದವನ್ನು ಬರೆಯಲಾಗಿತ್ತು ಎಂಬುದನ್ನಿಲ್ಲಿ ಸ್ಮರಿಸುವುದು ಅಗತ್ಯ.

ಪ್ರಿನ್‌ಸ್ಟನ್ನಿನಿಂದ ಐನ್‌ಸ್ಟೈನ್ ೧೯೩೫ ಡಿಸೆಂಬರ್ ೨೦ರಂದು ರವಾನಿಸಿದ ಈ ಮುಂದಿನ ಕಾಗದ ಸ್ವಯಂಸ್ಪಷ್ಟವಾಗಿದೆ. ಇದೊಂದು ಯೋಗಾಯೋಗ. ಏಕೆಂದರೆ ಈ ಕಾಗದವನ್ನು ಪ್ರೇರಿಸಿದ ಸನ್ನಿವೇಶಗಳ ಬಗೆಗೆ ದಾಖಲೆ ಇಲ್ಲ. ಬಾಯಿಮಾತಿನಲ್ಲಿ ಕೋರಲಾದ ಪ್ರಶ್ನೆಗೆ ಇದು ಉತ್ತರವಾಗಿದ್ದಿರಬಹುದು :

● ಪ್ರಿಯ ಪುಟಾಣಿಗಳೇ

ಕ್ರಿಸ್ಮಸ್ ಜ್ಯೋತಿಯ ಉಜ್ಜ್ವಲ ವಾತಾವರಣದಲ್ಲಿ ಆನಂದಮಯ ಉತ್ಸವಗಳನ್ನು ಸಂಭ್ರಮದಿಂದ ಆಚರಿಸಲು ಒಂದುಗೂಡಿರುವ ಪುಟಾಣಿಗಳಾದ ನಿಮ್ಮನ್ನು ಚಿತ್ರಿಸಿಕೊಳ್ಳುವುದು ನನಗೆ ತುಂಬ ಸಂತೋಷದ ಅನುಭವ. ಈ ಉತ್ಸವಗಳ ಮೂಲಕ ನೀವು ಯಾವಾತನ ಜನನವನ್ನು ಆಚರಿಸುತ್ತಿರುವಿರೊ ಆತನ ಬೋಧನೆಗಳನ್ನು ಕೂಡ ಸ್ಮರಿಸಿಕೊಳ್ಳಿ. ಅವು ಅತಿ ಸರಳವಾದರೂ, ಹೆಚ್ಚುಕಡಿಮೆ ಈ ಎರಡು ಸಾವಿರ ವರ್ಷಗಳಲ್ಲಿ, ಮನುಷ್ಯರ ನಡುವೆ ಅನುಷ್ಠಾನಕ್ಕೆ ಬರುವುದರಲ್ಲಿ ಮಾತ್ರ ವಿಫಲವಾಗಿವೆ. ನಿಮ್ಮ ಒಡನಾಡಿಗಳ ಸಂತೋಷ ಸಂತುಷ್ಟಿಗಳಲ್ಲಿ—ಮನುಷ್ಯನ ವಿರುದ್ಧ ಮನುಷ್ಯನ ಮಾರಕ ಘರ್ಷಣೆಗಳಲ್ಲಿ ಅಲ್ಲ—ಸಂತೃಪ್ತಿ ತಳೆಯಲು ಕಲಿಯಿರಿ. ಈ ಸಹಜ ಮನೋಭಾವವನ್ನು ನಿಮ್ಮೊಳಗೆ ನೀವು ಕಂಡುಕೊಳ್ಳುವಿರಾದರೆ, ಆಗ ಬದುಕಿನಲ್ಲಿ ನಿಮಗೆ ಎದುರಾಗುವ ಒಂದೊಂದು ಹೆಣಹೊರೆಯೂ ಹೂಹಗುರವಾಗುತ್ತದೆ, ಅಥವಾ ಕನಿಷ್ಠ ಪಕ್ಷ ಸಹ್ಯವಾದರೂ ಆಗಿರುತ್ತದೆ; ಮತ್ತು ನೀವು ನಿಮ್ಮ ಹಾದಿಯನ್ನು ಭಯರಹಿತರಾಗಿ ಸಹನೆಯಲ್ಲಿ ಕಂಡುಕೊಳ್ಳುವಿರಿ, ಮತ್ತು ಎಲ್ಲೆಡೆಗಳಲ್ಲಿಯೂ ಆನಂದವನ್ನು ಪಸರಿಸುವಿರಿ.

ಹೆಣ್ಣುಮಗುವೊಬ್ಬಳು ಹಾಕಿದ ಬಾಯಿಪ್ರಶ್ನೆಯನ್ನು ಅವಳ ತಾಯಿ ಐನ್‌ಸ್ಟೈನರಿಗೆ ರವಾನಿಸಿದಳು. ಇವರು ೧೯೫೧ ಜೂನ್ ೧೯ರಂದು ಇಂಗ್ಲಿಷಿನಲ್ಲಿ ಬರೆದರು :

● ನೂರುಕೋಟಿ ವರ್ಷಗಳಿಗಿಂತ ಕೊಂಚ ಹೆಚ್ಚು ಕಾಲದಿಂದಲೂ ಈ ಭೂಮಿ ಉಳಿದುಬಂದಿದೆ. ಇದರ ಅಳಿವು ಎಂದು ಎಂಬ ಪ್ರಶ್ನೆಗೆ ನನ್ನ ಸಲಹೆ ಇದು : ಕಾದು ನೋಡು !●

ಮರೆತ ಮಾತಾಗಿ ಒಂದು ವಾಕ್ಯ ಸೇರಿಸಿದರು :

● ನಿನ್ನ ಸಂಗ್ರಹಕ್ಕೆ ಸೇರಿಸಲೆಂದು ಕೆಲವು ಅಂಚೆಚೀಟಿಗಳನ್ನು ಲಗತ್ತಿಸಿದ್ದೇನೆ.●

ಡ್ರೆಸ್ಡನ್ನಿನಲ್ಲಿ ಒಬ್ಬ ಸರ್ಕಾರಿ ನೌಕರ ತಾನು ರಾಜಕಾರಣಿ ಹಾಗೂ ಆಡ್ಲೀರಿಯನ್ ಮನೋರೋಗ ಚಿಕಿತ್ಸಕ[24] ಎಂಬುದಾಗಿ ಹೇಳಿಕೊಳ್ಳುತ್ತಿದ್ದ. ಪ್ರಮುಖ ವ್ಯಕ್ತಿಗಳ ಮನೋವಿಶ್ಲೇಷಣೆಗಳನ್ನು ಆಧರಿಸಿ ಗ್ರಂಥ ರಚಿಸಬೇಕೆಂಬುದು ಅವನ ಯೋಜನೆ. ಇದರ ಬಗ್ಗೆ ಅವನು ಆಗ ಬರ್ಲಿನ್ನಿನಲ್ಲಿದ್ದ ಐನ್‌ಸ್ಟೈನರಿಗೆ, ೧೯೨೭ ಜನವರಿ ೧೭ರಂದು, ಕಾಗದ ಬರೆದು ಇವರು ಮನೋವಿಶ್ಲೇಷಣೆಗೆ ಒಳಪಡಲು ಒಪ್ಪಿಗೆ ನೀಡಬಹುದೇ ಎಂಬುದಾಗಿ ಪ್ರಾರ್ಥಿಸಿದ್ದ.

ಈ ಕಾಗದಕ್ಕೆ ಉತ್ತರವನ್ನು ನಿಜಕ್ಕೂ ರವಾನಿಸಲಾಯಿತೇ ಎಂಬುದು ತಿಳಿದಿಲ್ಲ. ಆದರೆ ಅದೇ ಕಾಗದದಲ್ಲಿ ಐನ್‌ಸ್ಟೈನರ ಹಸ್ತಾಕ್ಷರಗಳಲ್ಲಿ ಉತ್ತರದ ಕರಡು ಇದೆ. ಭಾಷೆ ಜರ್ಮನ್ :

● ನಿಮ್ಮ ಕೋರಿಕೆಯನ್ನು ಮನ್ನಿಸಲಾರೆನೆಂದು ತಿಳಿಸಲು ವಿಷಾದಿಸುತ್ತೇನೆ. ಏಕೆಂದರೆ ನಾನು ವಿಶ್ಲೇಷಣೆಗೆ ಒಳಪಡದೆ ನೇಪಥ್ಯದಲ್ಲಿರಬೇಕೆಂಬುದೇ ನನ್ನ ಅಪೇಕ್ಷೆ. ●

ಸಿಗ್ಮಂಡ್ ಫ್ರಾಯ್ಡ್[25] ಅವರ ಕಾರ್ಯದ ಬಗೆಗೆ ಐನ್‌ಸ್ಟೈನ್ ಮೊದಮೊದಲು ಒಲವು ತಳೆದಿರದಿದ್ದರೂ ತರುವಾಯದ ದಿನಗಳಲ್ಲಿ ಇವರ ಮನಸ್ಸು ಬದಲಾಗಿತ್ತು. ಐನ್‌ಸ್ಟೈನರಿಗೆ ಐವತ್ತು ತುಂಬಿದಾಗ ಫ್ರಾಯ್ಡ್, ಇತರ ಅನೇಕರಂತೆ, ಇವರಿಗೆ ಶುಭಸಂದೇಶ ಕಳಿಸಿದರು. ತಮ್ಮ ಕಿರುಬರೆಹದಲ್ಲಿ ಫ್ರಾಯ್ಡ್, ಐನ್‌ಸ್ಟೈನರನ್ನು "ಓ ಅದೃಷ್ಟಶಾಲಿಯೇ" ["Sie Glu-cklicher"] ಎಂಬುದಾಗಿ ಸಂಬೋಧಿಸಿದ್ದರು. ಈ ವಿಶೇಷಣೆ ಐನ್‌ಸ್ಟೈನರ ಕುತೂಹಲವನ್ನು ಕೆರಳಿಸಿತು. ಬರ್ಲಿನ್ನಿನಲ್ಲಿದ್ದ ಇವರು ೧೯೨೯ ಮಾರ್ಚ್ ೨೨ರಂದು ಮಾರೋಲೆ ಬರೆದರು :

● ಪೂಜ್ಯ ಹಿರಿಯರೇ

ನನ್ನನ್ನು ನೆನಪಿಸಿಕೊಂಡುದಕ್ಕಾಗಿ ನಿಮಗೆ ನನ್ನ ಒಲುಮೆಯ ನೆನಕೆಗಳು. ನನ್ನ 'ಅದೃಷ್ಟ'ವನ್ನೇಕೆ ಎತ್ತಿ ಪ್ರಸ್ತಾವಿಸಿರುವಿರಿ ? ಅಷ್ಟೊಂದು

ಮಂದಿ ಜನರ—ನಿಜಕ್ಕೂ ಮನುಕುಲದ—ತೊಗಲಿನಾಳಕ್ಕೆ ನೀವು ನುಸುಳಿದ್ದರೂ ನನ್ನದರೊಳಕ್ಕೆ ನುಸುಳುವ ಅವಕಾಶ ನಿಮಗೆ ಲಭಿಸಲಿಲ್ಲ.

ಪರಮ ಗೌರವ ಮತ್ತು ಹಾರ್ದಿಕ ಶುಭಾಶಯಗಳ ಸಮೇತ.●

ಉತ್ತರ ಬರೆಯುತ್ತ ಫ್ರಾಯ್ಡ್ ವಿವರಣೆ ನೀಡಿದರು. ಭೌತವಿಜ್ಞಾನಕ್ಕೆ ಪ್ರವೇಶವಿರದ ಯಾರೂ ಐನ್‌ಸ್ಟೈನರ ಕೃತಿಯನ್ನು ಒರೆಗೆ ಹಚ್ಚಲಾರರು, ಫ್ರಾಯ್ಡರ ಕಾರ್ಯವಾದರೋ ಪ್ರತಿಯೊಬ್ಬನ ನಿರ್ಣಯಕ್ಕೂ—ಮನೋವಿಜ್ಞಾನ ಆತನಿಗೆ ಪರಿಚಿತವಿರಲಿ ಇಲ್ಲದಿರಲಿ—ಒಳಪಡಬೇಕಾಗಿತ್ತು. ಎಂದೇ ತಾವು ಐನ್‌ಸ್ಟೈನರನ್ನು ಅದೃಷ್ಟಶಾಲಿಯೆಂದು ಪರಿಗಣಿಸಿದುದಾಗಿತ್ತು.

ನವಜಾತ ಕಲೆಗೆ[21] ಮೀಸಲಾಗಿದ್ದ ಜರ್ಮನ್ ನಿಯತಕಾಲಿಕೆಯೊಂದರ ಸಂಪಾದಕ, ಬರ್ಲಿನ್ನಿನಲ್ಲಿದ್ದ ಐನ್‌ಸ್ಟೈನರಿಗೆ, ೧೯೨೧ ಜನವರಿ ೨೦ರಂದು, ಪತ್ರ ಬರೆದು ಯಾವುದೇ ದತ್ತಯುಗಕ್ಕೆ ಸೇರಿದ ಕಲಾಭಿವರ್ಧನೆಗಳಿಗೂ ವೈಜ್ಞಾನಿಕ ಫಲಿತಾಂಶಗಳಿಗೂ ನಡುವೆ ನಿಕಟ ಸಂಬಂಧವಿದೆಯೆಂದು ತನಗೆ ಖಚಿತವಾಗಿ ಮನವರಿಕೆ ಆಗಿದೆಯೆಂದು ತಿಳಿಸಿದ. ಈ ವಿಷಯದ ಮೇಲೆ ತನ್ನ ನಿಯತಕಾಲಿಕೆಯಲ್ಲಿ ಪ್ರಕಟಿಸಲೋಸ್ಕರ ಕೆಲವು ಪರಿಚ್ಛೇದಗಳನ್ನು ಬರೆದು ಕಳಿಸಬೇಕೆಂದು ಅವರನ್ನು ಪ್ರಾರ್ಥಿಸಿದ. ೧೯೨೧ ಜನವರಿ ೨೭ರಂದು ಐನ್‌ಸ್ಟೈನ್ ಬರೆದರು :

● ನೀವು ಸೂಚಿಸಿರುವ ವಿಷಯದ ಮೇಲೆ ಬರೆಯಲು ಸ್ವಂತವಾದದ್ದು ಏನೊಂದೂ ನನ್ನಲ್ಲಿ ಇಲ್ಲದಿದ್ದರೂ—ಇನ್ನು ಪ್ರಕಟಣಾರ್ಹವಾದದ್ದಂತೂ ಏನೂ ಇಲ್ಲವೆಂಬುದು ಸ್ಪಷ್ಟವಷ್ಟೆ—ನನ್ನ ಸದ್ಭಾವನೆಯ ದ್ಯೋತಕವಾಗಿ ಇದರೊಂದಿಗೆ ಲಗತ್ತಿಸಿರುವ ಸೂಕ್ತಿರೂಪದ ಹೇಳಿಕೆಯನ್ನು ಕಳಿಸುತ್ತಿದ್ದೇನೆ. ನನ್ನ ಶಾಯಿ ಕುಂಚಿಸಬಲ್ಲದಾಗಿದ್ದರೆ ನಿಮ್ಮ ಸ್ನೇಹಶೀಲಪತ್ರದಲ್ಲಿ ಅಪೇಕ್ಷಿಸಲಾಗಿರುವ ಇಚ್ಛೆಯನ್ನು ಇನ್ನಷ್ಟು ಸಮರ್ಥವಾಗಿ ಈಡೇರಿಸಿ ಪುಷ್ಕಳ ಕೃತಿಯನ್ನೇ ಕಳಿಸಿರುತ್ತಿದ್ದೆ. ●

ಆ ನಿಯತಕಾಲಿಕೆಯಲ್ಲಿ ಪ್ರಕಟಿಸಲಾದ 'ಸೂಕ್ತಿರೂಪದ ಹೇಳಿಕೆ' ಹೀಗಿತ್ತು :

### ಕಲಾತ್ಮಕ ಮತ್ತು ವೈಜ್ಞಾನಿಕ ಅನುಭವಕ್ಕೆ ಸಾಮಾನ್ಯವಾಗಿರುವುದೇನು ?

● ಎಲ್ಲಿ ಪ್ರಪಂಚ ನಮ್ಮ ವೈಯಕ್ತಿಕ ಆಸೆ ಆಕಾಂಕ್ಷೆಗಳ ರಂಗಭೂಮಿ ಆಗುವುದು ಕೈದಾಗುವುದೊ ಎಲ್ಲಿ ನಾವು ಅದರೆದುರು ಮುಕ್ತ ಜೀವಿಗಳಾಗಿ ಅದನ್ನು ಮೆಚ್ಚುತ್ತ ಪ್ರಶ್ನಿಸುತ್ತ ಮತ್ತು ವೀಕ್ಷಿಸುತ್ತ ನಿಲ್ಲುವೆವೊ ಅಲ್ಲಿ ನಾವು ಕಲೆಯ ಮತ್ತು ವಿಜ್ಞಾನದ ಪ್ರಪಂಚವನ್ನು ಪ್ರವೇಶಿಸಿರುತ್ತೇವೆ. ನೋಡಿದ್ದನ್ನೂ ಅನುಭವಿಸಿದ್ದನ್ನೂ ತರ್ಕಶಾಸ್ತ್ರದ ಪರಿಭಾಷೆಯಲ್ಲಿ ಚಿತ್ರಿಸಿದ್ದಾದರೆ ಆಗ ನಾವು ವಿಜ್ಞಾನದಲ್ಲಿ ಉದ್ಯುಕ್ತರಾಗಿರುತ್ತೇವೆ. ಜಾಗೃತ ಮನಸ್ಸಿಗೆ ಅಪ್ರವೇಶ್ಯವಾಗುವ ಅಂತರ್ಬೋಧೆಯಿಂದ ಅರ್ಥಪೂರ್ಣವಾದ

ದ್ದೆಂಬುದಾಗಿ ಪರಿಗಣಿಸಲ್ಪಡುವ ರೂಪಗಳ ಮೂಲಕ ಅದನ್ನು ಸಂವಹನಿಸಿ ದ್ದಾದರೆ ಆಗ ನಾವು ಕಲೆಯಲ್ಲಿ ಉದ್ಯುಕ್ತರಾಗಿರುತ್ತೇವೆ. ವೈಯಕ್ತಿಕ ಕಾಳಜಿ ಮತ್ತು ಸಂಕಲ್ಪಗಳಿಗೆ ಅತೀತವಾದ ಆ ಯಾವುದೋ ಒಂದರ ಬಗೆಗಿನ ಸಪ್ರೇಮನಿಷ್ಠೆಯೇ ಇವೆರಡಕ್ಕೂ ಸಾಮಾನ್ಯವಾದದ್ದು. ●

ಒಂದು ಹಿಮ್ಮಾತು: ನಾಟ್ಸಿಗಳು ಅಧಿಕಾರಾರೂಢರಾದಾಗ ಈ ಸಂಪಾದಕ—ಈತ ಯೆಹೂದ್ಯನಾಗಿರಲಿಲ್ಲ—ಜರ್ಮನಿಯಿಂದ ಪರಾರಿ ಯಾಗಲು ಪ್ರಯತ್ನಿಸಿದ. ಗಡಿಯಲ್ಲಿ ಈತನನ್ನು ತಡೆದು ನಿಲ್ಲಿಸಿದಾಗ ಆತ್ಮಹತ್ಯೆ ಮಾಡಿಕೊಂಡ.

ಈ ಮುಂದಿನ ಎರಡು ಸೂಕ್ತಿಗಳನ್ನು ಐನ್‌ಸ್ಟೈನ್ ನ್ಯೂಯಾರ್ಕ್ ರಾಜ್ಯದ ಹಟ್ಟಿಂಗ್ಟನ್ನಿನಲ್ಲಿ ಗುರುತು ಹಾಕಿದರು(೧೯೩೭). ಇವನ್ನು ಗೀಚುವಾಗ ಇವರು ಇದೇ ಮೇಲಿನ ಬಾಬಿನಿಂದ ಪ್ರಭಾವಿತರಾಗಿರಲಿಲ್ಲವೆಂದು ಹೆಚ್ಚು ಕಡಿಮೆ ಖಂಡಿತವಾಗಿಯೇ ಹೇಳಬಹುದಾದರೂ ಇವುಗಳಿಗೆ ಅದರೊಡನೆ ಸಂಬಂಧವಿಲ್ಲವೆನ್ನುವಂತಿಲ್ಲ:

● ದೇಹ ಮತ್ತು ಆತ್ಮ ಎರಡು ವಿಭಿನ್ನ ವಸ್ತುಗಳಲ್ಲ, ಬದಲು, ಒಂದೇ ವಸ್ತುವನ್ನು ಅರಿಯಲು ಎರಡು ವಿಭಿನ್ನ ಮಾರ್ಗಗಳು ಮಾತ್ರ. ಇದೇ ರೀತಿ ಭೌತವಿಜ್ಞಾನ ಮತ್ತು ಮನೋವಿಜ್ಞಾನ ನಮ್ಮ ಅನುಭವಗಳನ್ನು ವ್ಯವಸ್ಥಿತ ಚಿಂತನೆಯ ಮೂಲಕ ಒಟ್ಟಾಗಿ ಸಂಯೋಜಿಸಲು ಎರಡು ವಿಭಿನ್ನ ಪ್ರಯತ್ನಗಳುಮಾತ್ರ.

ರಾಜಕೀಯ ಒಂದು ಲೋಲಕ. ಅನಾಯಕತೆ ಮತ್ತು ದಬ್ಬಾಳಿಕೆ ನಡುವಿನ ಇದರ ತೂನೆತಗಳಿಗೆ ಉರುವಲು ಪೂರೈಕೆ ಆಗುವುದು ಅವಿಚ್ಛಿನ್ನ ವಾಗಿ ಪುನರುಜ್ಜೀವಿತವಾಗುತ್ತಿರುವ ಭ್ರಮೆಗಳಿಂದ. ●

ಇಂಗ್ಲಿಷಿನಲ್ಲಿರುವ ಈ ಮುಂದಿನ ಸೂಕ್ತಿ ಐನ್‌ಸ್ಟೈನರದೆಂಬುದಾಗಿ ದಕ್ಷಿಣ ಅಮೆರಿಕದ ಒಬ್ಬ ಲೇಖಕ ಹೇಳಿದ್ದಾನೆ. ಇದನ್ನು ಆತ ತನ್ನ ಪತ್ರ ಶಿರದಲ್ಲಿ ಧ್ಯೇಯವಾಕ್ಯವಾಗಿ ಬಳಸುತ್ತಿದ್ದ. ಸಂಭಾಷಣೆಗಳ ವೇಳೆ ಐನ್‌ಸ್ಟೈನ್ ಪದೇಪದೇ ಹೇಳುತ್ತಿದ್ದ ಮಾತುಗಳನ್ನು ಇದು ಯಥಾವತ್ತಾಗಿ ಪ್ರತಿಧ್ವನಿಸುವುದರಿಂದ ಇದನ್ನು ತಾಜಾಮಾಲೆಂದು ಅಂಗೀಕರಿಸಬಹುದು. ಆ ಲೇಖಕ ಕೊಟ್ಟಿರುವುದು ಇಂಗ್ಲಿಷ್ ರೂಪವನ್ನು ಮಾತ್ರ:

● ರಾಷ್ಟ್ರೀಯತೆ ಒಂದು ಶಿಶುರೋಗ. ಇದು ಮನುಕುಲದ ದಡಾರ. ●

ಸನ್ನದು ಪಡೆದಿದ್ದ ಒಬ್ಬಳು ಬ್ಯಾಪ್ಟಿಸ್ಟ್ ಧರ್ಮಾಧಿಕಾರಿಣಿ ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ೧೯೫೨ ಜುಲೈ ೧೭ರಂದು ಪ್ರೀತಿಪುರಸ್ಸರವಾದ ಸುವಾರ್ತಾಪತ್ರವೊಂದನ್ನು ಬರೆದಳು. ಕ್ರೈಸ್ತವೇದದಿಂದ ಹಲವಾರು ಉಕ್ತಿಗಳನ್ನು ಉದ್ಧರಿಸುತ್ತ ಆಕೆ ಐನ್‌ಸ್ಟೈನ್ ಏನಾದರೂ ತಮ್ಮ ಅಂತರಾತ್ಮ ಅದರ ಕರ್ತಾರನೊಡನೆ ಹೊಂದಿರುವ ಸಂಬಂಧವನ್ನು ಪರಿಗಣಿಸಿರುವರೇ, ಮತ್ತು ಮರಣಾನಂತರ ತಮಗೆ ಭಗವಂತನ ಜೊತೆ ಚಿರಂತನ ಜೀವನವಿದೆಯೆಂಬುದರ ಬಗೆಗೆ ಭರವಸೆ ತಳೆದಿರುವರೇ ಎಂಬುದಾಗಿ ಪ್ರಶ್ನಿಸಿದ್ದಳು. ಇದಕ್ಕೆ ಜವಾಬು ಕಳಿಸಲಾಯಿತೇ ಇಲ್ಲವೇ ಎಂಬುದು ತಿಳಿದಿಲ್ಲ. ಐನ್‌ಸ್ಟೈನ್ ಪತ್ರಾಗಾರದಲ್ಲಿರುವ ಈ ಕಾಗದದ ಮೇಲೆ ಅವರು ಇಂಗ್ಲಿಷಿನಲ್ಲಿ ಈ ಮುಂದಿನ ಸಾಲುಗಳನ್ನು ಸ್ವಹಸ್ತದಲ್ಲಿ ಬರೆದಿದ್ದಾರೆ:

● ವ್ಯಕ್ತಿಯ ಅಮರತ್ವದಲ್ಲಿ ನನಗೆ ನಂಬಿಕೆ ಇಲ್ಲ. ನೀತಿಶಾಸ್ತ್ರ ಮಾನವ ಕುಲಕ್ಕೆ ಮಾತ್ರ ಸಂಬಂಧಿಸಿದ ಕಾಳಜಿ. ಇದಕ್ಕೆ ಬೆಂಬಲವಾಗಿ ಯಾವ ಅತಿಮಾನವ ಅಧಿಕಾರವೂ ಇಲ್ಲವೆಂಬುದಾಗಿ ಭಾವಿಸಿದ್ದೇನೆ. ●

ವಿಶ್ವದಲ್ಲಿ ಬುದ್ಧಿವಂತಿಕೆಯ[27] ಪಾತ್ರವನ್ನು ಕುರಿತಂತೆ ಐನ್‌ಸ್ಟೈನರ ಹೇಳಿಕೆಯನ್ನೂ ಹೆಸರಾಂತ ವಿಕಾಸವಾದಿಯೊಬ್ಬರ ತೋರ್ಕೆಗೆ ವಿರುದ್ಧಾರ್ಥ ನೀಡುವ ಹೇಳಿಕೆಯನ್ನೂ ಉಲ್ಲೇಖಿಸಿದ್ದ ಒಂದು ಕಾಗದ ೧೯೫೪ರಲ್ಲಿ ಅಥವಾ ೧೯೫೫ರಲ್ಲಿ ಐನ್‌ಸ್ಟೈನರಿಗೆ ಬಂತು. ಜವಾಬಿಗಾಗಿ ತಯಾರಿಸಿದ ಜರ್ಮನ್ ಅನುವಾದ ಇಲ್ಲಿದೆ. ವಾಸ್ತವವಾಗಿ ಜವಾಬನ್ನು ಕಳಿಸಲಾಯಿತೋ ಇಲ್ಲವೋ ತಿಳಿದಿಲ್ಲ:

● ಜರ್ಮನ್ ಪಾಠವೊಂದರ ದೋಷಪೂರ್ಣ ಅನುವಾದವೇ ಇಲ್ಲಿಯ ತಪ್ಪು ತಿಳಿವಳಿಕೆಯ ಕಾರಣ. ನಿರ್ದಿಷ್ಟವಾಗಿ ಹೇಳುವುದಾದರೆ 'ಅನುಭಾವಿಕ' ಪದದ ಉಪಯೋಗ. ನಿಸರ್ಗಕ್ಕೆ ಒಂದು ಉದ್ದೇಶ, ಇಲ್ಲವೇ ಗಮ್ಯ, ಇಲ್ಲವೇ ಮಾನವ ಸ್ವಭಾವಾತ್ಮಕವೆಂದು ಭಾವಿಸಬಹುದಾದ ಯಾವುದೇ ಗುಣವಿರಬಹುದೆಂದು ನಾನೆಂದೂ ಆರೋಪಿಸಿಲ್ಲ.

ನಾವು ತೀರ ಅಪರಿಪೂರ್ಣವಾಗಿ ಮಾತ್ರ ಪರಿಗ್ರಹಿಸಬಹುದಾದ ಭವ್ಯ ರಚನೆಯನ್ನು ನಾನು ನಿಸರ್ಗದಲ್ಲಿ ಕಾಣುತ್ತೇನೆ. ಚಿಂತನಶೀಲನಾದ ಒಬ್ಬ ವ್ಯಕ್ತಿಯಲ್ಲಿ ಇದು 'ವಿನೀತತಾ' ಭಾವವನ್ನು ಪ್ರೇರಿಸಬೇಕು. ಇದೊಂದು ಸಾಚಾ ಧಾರ್ಮಿಕಭಾವ. ಅನುಭಾವದೊಡನೆ ಇದಕ್ಕೆ ಏನೂ ಸಂಬಂಧವಿಲ್ಲ. ●

ಬರ್ಲಿನ್ನಿನಲ್ಲಿದ್ದ ಐನ್‌ಸ್ಟೈನರಿಗೆ ವಿಯೆನ್ನಾದಲ್ಲಿದ್ದ ಒಬ್ಬ ಮಹಿಳೆಯಿಂದ ೧೯೨೧ ಫೆಬ್ರುವರಿಯಲ್ಲಿ ಒಂದು ಕಾಗದ ಬಂದಿತು. ಆತ್ಮಕ್ಕೆ ಅಸ್ತಿತ್ವ ಇರುವುದರ ಬಗೆಗೆ ಮತ್ತು ಮರಣಾನಂತರ ಅದರೊಂದಿಗೆ ವೈಯಕ್ತಿಕ ಬಿಡಿ ಬೆಳೆವಣಿಗೆ ಇರುವುದರ ಬಗೆಗೆ ಐನ್‌ಸ್ಟೈನ್ ಏನಾದರೂ ಅಭಿಪ್ರಾಯ ತಳೆದಿರುವರೇ ಎಂದು ತಿಳಿಯುವುದು ಆ ಕಾಗದದ ಆಶಯವಾಗಿತ್ತು. ಇದೇ ತೆರನಾದ ಇತರ ಆಶಯಗಳೂ ಅದರಲ್ಲಿದ್ದುವು. ಐನ್‌ಸ್ಟೈನ್ ಈ ಪತ್ರಕ್ಕೆ ೧೯೨೧ ಫೆಬ್ರುವರಿ ೫ರಂದು ಸಾಕಷ್ಟು ವಿವರವಾಗಿ ಉತ್ತರ ಬರೆದರು. ಅದರಿಂದ ಒಂದು ಅಂಶವನ್ನು ಇಲ್ಲಿ ಉದ್ಧರಿಸಿದೆ :

● ಬ್ರಹ್ಮವಿದ್ಯೆ[28] ಮತ್ತು ಅಧ್ಯಾತ್ಮಜ್ಞಾನ[29] ಎಂಬ ಹೆಸರಿನ ಚಿಂತನ ವಿಧಾನಗಳ ಉಗ್ರ ಬೆಳೆವಣಿಗೆಯಲ್ಲಿ ವಿಶೇಷವಾಗಿ ಪ್ರಕಟವಾಗುತ್ತಿರುವ ನಮ್ಮ ಕಾಲದ ಅನುಭಾವಿಕ ಪ್ರವೃತ್ತಿ, ನನ್ನ ಮಟ್ಟಿಗೆ ಹೇಳುವುದಾದರೆ, ದೌರ್ಬಲ್ಯದ ಮತ್ತು ಗೊಂದಲದ ಒಂದು ಕುರುಹಲ್ಲದೆ ಬೇರೇನೂ ಅಲ್ಲ.

ಇಂದ್ರಿಯಗಳು ಗ್ರಹಿಸಿದ ಮಾಹಿತಿಗಳ ಪುನರುತ್ಪಾದನೆ ಮತ್ತು ಸಂಯೋಜನೆಗಳೇ ನಮ್ಮ ಆಂತರಿಕ ಅನುಭವಗಳಾಗಿರುವುದರಿಂದ ದೇಹ ರಹಿತ ಆತ್ಮದ ಪರಿಕಲ್ಪನೆ ಅರ್ಥಹೀನ ಶೂನ್ಯಭಾವನೆ ಎಂದು ನನಗನ್ನಿಸುತ್ತದೆ. ●

ಮೆಕ್‌ಗ್ರಾಹಿಲ್ ಎಂಬ ಹೆಸರಿನ ಅಮೆರಿಕದ ಪ್ರಕಟಣ ವ್ಯವಸ್ಥೆಯ ಅಂಗ ಸಂಸ್ಥೆಯೊಂದರ ಒಬ್ಬ ಅಧಿಕಾರಿ ಅಮೆರಿಕನ್ ಲೈಬ್ರರಿ ಅಸೋಸಿಯೇಷನ್ನಿನ ವಾರ್ಷಿಕ ಸಮ್ಮೇಳನದಲ್ಲಿ ಭಾಷಣ ಮಾಡಬೇಕಾಗಿತ್ತು. ೧೯೪೮ ಏಪ್ರಿಲ್ ೧ರಂದು ಅವನು ಐನ್‌ಸ್ಟೈನರಿಗೊಂದು ಕಾಗದ ಬರೆದ. ಸಾಮಾನ್ಯವ್ಯಕ್ತಿಗಾಗಿ ರಚಿಸಲಾದ ವಿಜ್ಞಾನ ಪುಸ್ತಕಗಳ, ಅಂದರೆ ಜನಪ್ರಿಯ ವಿಜ್ಞಾನ ವಾಙ್ಮಯದ, ಬಗೆಗೆ ಸಾರ್ವತ್ರಿಕವಾಗಿ ಕುಸಿಯುತ್ತಿರುವ ಆಸಕ್ತಿಯಿಂದ ಹೇಗೆ ಗ್ರಂಥಪಾಲರೂ ಪ್ರಕಾಶಕರೂ ವಿಹ್ವಲರಾಗಿರುವರೆಂದು ವಿವರಿಸಿ ಈ ನಿಟ್ಟಿನಲ್ಲಿ ಐನ್‌ಸ್ಟೈನರ ಸಲಹೆ ಕೋರಿದ. ಈ ಕುಸಿತದ ಕಾರಣಗಳ ಬಗೆಗೆ ಇವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕೆಂದು ಪ್ರಾರ್ಥಿಸಿದ. ಇತರ ಪ್ರಸಿದ್ಧ ವಿಜ್ಞಾನಿಗಳಿಗೂ ವಿಜ್ಞಾನವಾಙ್ಮಯಕರ್ತೃಗಳಿಗೂ ಇದೇ ಮಾದರಿಯ ಮನವಿಪತ್ರಗಳನ್ನು ಕಳಿಸಲಾಗಿದೆ ಎಂದು ತಿಳಿಸಿದ. ವಿಜ್ಞಾನವನ್ನು ಜನಪ್ರಿಯಗೊಳಿಸುವುದರ ಬಗೆಗೆ ದೀರ್ಘಕಾಲದಿಂದಲೂ ಖಚಿತ ಮತ್ತು ದೃಢನಿಲುವು ತಳೆದಿದ್ದ ಐನ್‌ಸ್ಟೈನ್ ಮಾರೋಲೆ ಬರೆಯಲು

ಒಂದಿಷ್ಟು ಸಹ ತಡ ಮಾಡಲಿಲ್ಲ. ಏಪ್ರಿಲ್ ಇರಂದು ಈ ಮುಂದಿನ ಕಾಗದ ವನ್ನು ಇಂಗ್ಲಿಷಿನಲ್ಲಿ ಕಳಿಸಿದರು :

● ನನ್ನ ಅಭಿಮತದಲ್ಲಿ ಪರಿಸ್ಥಿತಿ ಹೀಗಿದೆ :

ಸಾಮಾನ್ಯ ವ್ಯಕ್ತಿಗಾಗಿ ಬರೆಯಲಾದವು ಎನ್ನಲಾದ ಹೆಚ್ಚಿನ ವಿಜ್ಞಾನ ಪುಸ್ತಕಗಳು ಉದ್ದೇಶಿಸುವುದು ಓದುಗನ ಮೇಲೆ ವಿಶೇಷ ಪ್ರಭಾವವನ್ನು ಅಚ್ಚೊತ್ತುವುದೇ ವಿನಾ ('ಪರಮಾದ್ಭುತ!' 'ನಾವೆಂಥ ಗಹನ ಪ್ರಗತಿ ಸಾಧಿಸಿದ್ದೇವೆ!' ಇತ್ಯಾದಿ) ಆತನಿಗೆ ವಿಜ್ಞಾನದ ಪ್ರಾಥಮಿಕ ಗುರಿ ಹಾಗೂ ವಿಧಾನಗಳನ್ನು ಸ್ಪಷ್ಟವಾಗಿಯೂ ಸರಾಗವಾಗಿಯೂ ವಿವರಿಸುವುದನ್ನಲ್ಲ. ಬುದ್ಧಿಶಾಲಿಯಾದ ಸಾಮಾನ್ಯ ವ್ಯಕ್ತಿಯೊಬ್ಬ ಇಂಥ ಕೆಲವು ಪುಸ್ತಕಗಳನ್ನು ಓದಲು ಪ್ರಯತ್ನಿಸಿದಾಗ ಆತನಿಗೆ ಪೂರ್ತಿ ಭ್ರಮ ನಿರಸನವಾಗುತ್ತದೆ. ಆತನ ತೀರ್ಮಾನವಿದು: ನಾನು ಅತಿ ದುರ್ಬಲಮನಸ್ಕ, ಎಂದೇ ಈ ಪ್ರಯತ್ನವನ್ನು ತೊರೆದುಬಿಡುವುದೇ ಕ್ಷೇಮ. ಇದರ ಜೊತೆಗೆ, ಒಟ್ಟು ವಿವರಣೆ ಬಹುತೇಕ ಭಾವೋದ್ರೇಕಕಾರಿ ಧಾಟಿಯಲ್ಲಿರುವುದಾಗಿ ಇದು ಕೂಡ ಒಬ್ಬ ಸಂವೇದನ ಶೀಲ ಸಾಮಾನ್ಯ ವ್ಯಕ್ತಿಯಲ್ಲಿ ಜುಗುಪ್ಸೆ ಹುಟ್ಟಿಸುತ್ತದೆ.

ಒಂದು ಮಾತಿನಲ್ಲಿ ಹೇಳುವುದಾದರೆ ತಪ್ಪು ಓದುಗರದಲ್ಲ, ಬದಲು ಲೇಖಕರದು ಮತ್ತು ಪ್ರಕಾಶಕರದು. ನನ್ನ ಸೂಚನೆ ಇದು : ಬುದ್ಧಿಶಾಲಿ ಹಾಗೂ ವಿವೇಚನಸಾಮರ್ಥ್ಯಯುತ ಸಾಮಾನ್ಯ ವಾಚಕನೊಬ್ಬ ವಿಜ್ಞಾನ ಕುರಿತ ಯಾವುದೇ 'ಜನಪ್ರಿಯ' ಪುಸ್ತಕವನ್ನು ಓದಿ ಮೆಚ್ಚಬಲ್ಲ ಎಂದು ಸ್ಥಾಪನೆ ಆಗುವ ತನಕವೂ ಅದನ್ನು ಪ್ರಕಟಿಸಬಾರದು. ●

ಈ ಕಾಗದ ಹಿಂದೆಂದೂ ಪ್ರಕಟವಾಗಿರುವಂತೆ ತೋರುವುದಿಲ್ಲ.

ಐನ್‌ಸ್ಟೈನ್ ೧೯೫೨ ಜನವರಿ ೨೮ರಂದು ಇಂಗ್ಲಿಷಿನಲ್ಲಿ ಬರೆದು *Popular Science Monthly*ಗೆ ಕಳಿಸಿದ ಕಾಗದದ ಮೊದಲ ಕೆಲವು ಸಾಲುಗಳನ್ನು ಇಲ್ಲಿ ಉಲ್ಲೇಖಿಸುವುದು ಉಚಿತವಾಗಿದೆ. ಮೇಲಿನ ಕಾಗದವನ್ನು ಓದಿ ಬೆಕ್ಕಸ ಬೆರಗಾದ ಒಬ್ಬ ಓದುಗನಿಂದ ಸಂಪಾದಕನಿಗೆ ಒಂದು ಪತ್ರ ಬಂದಿತ್ತು. ಆ ಓದುಗನ ಪ್ರಕಾರ ಐನ್‌ಸ್ಟೈನ್ ತಮ್ಮ ಕೃತಿಯನ್ನು ಕುರಿತು ಅದು 'ವಿಶ್ವರಹಸ್ಯಗಳನ್ನು ಬಿಡಿಸಬಲ್ಲದು' ಎಂದಿದ್ದರಂತೆ. ಐನ್‌ಸ್ಟೈನರ ಆ ಪರಮಾದ್ಭುತ ಕೃತಿ ಏನೆಂಬುದಾಗಿ ಆತ ಪ್ರಶ್ನಿಸಿದ್ದ. ಓದುಗನ ಪ್ರಶ್ನೆಗಳಿಗೆ ಉತ್ತರ ಬರೆದು ಕಳಿಸಬೇಕೆಂಬುದಾಗಿ ಸಂಪಾದಕ ಐನ್‌ಸ್ಟೈನರನ್ನು ಪ್ರಾರ್ಥಿಸಿದ. ಸರಳವೂ ನಿರಾಡಂಬರವೂ ಆದ ಪದಗಳಲ್ಲಿ ಇವರು ತಮ್ಮ

ವಿವರಣೆ ಬರೆದು ಕಳಿಸಿದರು. ಆದರೆ ಪತ್ರದ ಪ್ರಾರಂಭದಲ್ಲಿ ಈ ಮುಂದಿನ ಟೀಕೆ ಮಾಡದಿರಲು ಸಾಧ್ಯವಾಗಲಿಲ್ಲ:

● ನನ್ನ ಪ್ರಯತ್ನಗಳ ಸಾಧನೆಯ ಬಗೆಗೆ ಸಾಮಾನ್ಯ ವಾಚಕರಲ್ಲಿ ಉತ್ಪ್ರೇಕ್ಷಿತ ಚಿತ್ರ ಮೂಡಿದರೆ ತಪ್ಪು ನನ್ನದಲ್ಲ. ನಿಜಕ್ಕೂ ಇದು ಜನಪ್ರಿಯ ವಿಜ್ಞಾನ ವಾಙ್ಮಯವನ್ನು ರಚಿಸುವ ಲೇಖಕರ ಕೊಡುಗೆ. ಇವರು ಪ್ರತಿಯೊಂದನ್ನೂ ಎಷ್ಟು ಸಾಧ್ಯವೋ ಅಷ್ಟು ಉದ್ರೇಕಪ್ರೇರಕ ರೀತಿಯಲ್ಲಿ ಪ್ರಕಟಿಸುತ್ತಾರೆ. ●

ಇಲ್ಲಿ ಎರಡು ಬಾಬುಗಳನ್ನು ಜೋಡಿಯಾಗಿ ಪ್ರಕಟಿಸುತ್ತಿದ್ದೇವೆ. ಅತಿ ಗಹನ, ವೈಜ್ಞಾನಿಕ ಪ್ರಾಮುಖ್ಯವಿರುವ ಒಂದು ಭಾವನೆ ತಮ್ಮಲ್ಲಿ ಸ್ಫುರಿಸಿದೆ ಎಂಬುದಾಗಿ ನಂಬುತ್ತಿದ್ದ ಅನೇಕ ಮಂದಿಯಿಂದ ಐನ್‌ಸ್ಟೈನರಿಗೆ ರಾಶಿ ರಾಶಿ ಕಾಗದಗಳು ಬರುತ್ತಿದ್ದುವು. ಈ ಪರಿಸ್ಥಿತಿ ಅನಿವಾರ್ಯವೆಂಬುದು ಕಂಡಂತೆಯೇ ಇದೆ. ಇದರಿಂದಾಗಿ ಒಮ್ಮೊಮ್ಮೆ ಇವರ ಸಹನೆಯ ಕಟ್ಟೆ ಒಡೆದುಹೋಗುವುದಿತ್ತು. ನ್ಯೂಯಾರ್ಕ್ ನಗರದಲ್ಲಿದ್ದ ಒಬ್ಬ ಕಲಾವಿದ ೧೯೫೨ ಜುಲೈ ೭ರಂದು ಐನ್‌ಸ್ಟೈನರಿಗೊಂದು ಕಾಗದ ಬರೆದ. ಪ್ರಿನ್ಸ್‌ಟನ್ನಿನಿಂದ ಐನ್‌ಸ್ಟೈನ್ ೧೯೫೨ ಜುಲೈ ೧೦ರಂದು ಈ ಮುಂದಿನ ಮಾರೋಲೆಯನ್ನು ಇಂಗ್ಲಿಷಿನಲ್ಲಿ ಬರೆದು ರವಾನಿಸಿದರು:

● ಜುಲೈ ೭ರ ನಿಮ್ಮ ಕಾಗದಕ್ಕಾಗಿ ವಂದನೆ. ಈ ದೇಶದ ಬುದ್ಧಿವಂತ ಮಂದಿಯಲ್ಲಿ ಪ್ರಚಲಿತವಿರುವ ಎಲ್ಲ ಟೊಳ್ಳು ನಂಬಿಕೆಗಳ ಜೀವಂತ ತೊಟ್ಟಿ ನೀವಾಗಿರುವಂತೆ ತೋರುತ್ತದೆ. ನಾನೇನಾದರೂ ಒಬ್ಬ ನಿರಂಕುಶ ಪ್ರಭುವಾಗಿದ್ದ ಪಕ್ಷ ಈ ಎಲ್ಲ ಮತಿವಿಕಲ್ಪ ಅವಿವೇಕಗಳ ಬಳಕೆಯನ್ನು ರದ್ದುಗೊಳಿಸಿಬಿಡುತ್ತಿದ್ದೆ. ●

ಸ್ವಂತ ಪರಿಶ್ರಮದಿಂದ ಮೇಲೆ ಬಂದಿದ್ದಂಥ ಒಬ್ಬ ವ್ಯಕ್ತಿ, ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ, ೧೯೫೪ ಮಾರ್ಚ್ ೨೨ರಂದು, ಹಸ್ತಲಿಖಿತ ಸುದೀರ್ಘ ಪತ್ರ ಕಳಿಸಿದ. ಅದು ಇಂಗ್ಲಿಷ್ ಭಾಷೆಯಲ್ಲಿ ಬಲು ಅಡಕವಾಗಿ ನಾಲ್ಕು ಪುಟಗಳಲ್ಲಿ ಗಿಡಿಯಲಾಗಿದ್ದ ಕಾಗದ. ಐನ್‌ಸ್ಟೈನರಂತೆ ತಮಗನಿಸಿದ್ದನ್ನು ನೇರವಾಗಿ ನುಡಿಯಬಲ್ಲ ದಿಟ್ಟರು ಬಹುಮಂದಿ ಇಲ್ಲವೆಂಬುದು ಆತನ ಕಳವಳದ ಕಾರಣವಾಗಿತ್ತು. ಪ್ರಪಂಚವನ್ನು ಪ್ರಾಣಿಗಳಿಗೆ ಹಿಂತಿರು

ಗಿಸಿದರೆ ಹೇಗಾದೀತು? ಇದು ಆತನ ಚಿಂತನೆಯ ಧಾಟಿ. "ನಾನು ಯಾರೆಂದು ತಿಳಿಯಲು ನೀವು ಅಪೇಕ್ಷಿಸಬಹುದೆಂದು ಭಾವಿಸಿದ್ದೇನೆ" ಎನ್ನುತ್ತ, ಹೇಗೆ ತಾನು ಒಂಬತ್ತರ ಹರೆಯದಲ್ಲಿ ಇಟಲಿಯಿಂದ ಅಮೆರಿಕ ಸಂಯುಕ್ತ ಸಂಸ್ಥಾನ ಗಳಿಗೆ ಬಂದೆ, ಹೇಗೆ ಆಗ ಎದುರಿಸಬೇಕಾಗಿಬಂದ ಕಡು ಕುಳಿರಿನ ಕೊರೆತ ದಿಂದಾಗಿ ತನ್ನ ಸಹೋದರಿಯರೆಲ್ಲರೂ ಸತ್ತುಹೋದರು, ಆದರೆ ಹೇಗೆ ತಾನು ಮಾತ್ರ ಸಾವಿನ ದವಡೆಗಳಿಂದ ಪಾರಾಗಿ ಉಳಿದೆ, ಹೇಗೆ ತಾನು ಹದಿನೇಳನೆಯ ವಯಸ್ಸಿನಲ್ಲಿ ಸಂಜೆ ಶಾಲೆಗೆ ದಾಖಲಾದೆ—ಇತ್ಯಾದಿ ವಿವರಗಳನ್ನು ಬರೆದು ಅವೆಲ್ಲವುಗಳ ಪರಿಣಾಮವಾಗಿ ಸದ್ಯ ತಾನೊಬ್ಬ ಪ್ರಾಯೋಗಿಕ ಯಂತ್ರಕುಶಲಿ ಆಗಿರುವುದಾಗಿಯೂ ಬಿಡುವೇಳೆಯ ಸ್ವಂತೋದ್ಯಮವೊಂದರಲ್ಲಿ ಉದ್ಯುಕ್ತನಾಗಿರುವುದಾಗಿಯೂ ಕೆಲವೊಂದು ಏಕಸ್ವಗಳನ್ನು[30] ಗಳಿಸಿಕೊಂಡಿರುವುದಾಗಿಯೂ ತಿಳಿಸಿದ. ತಾನೊಬ್ಬ ನಾಸ್ತಿಕನೆಂಬುದಾಗಿ ಸಾರಿದ. ನಿಜವಿದ್ಯೆ ಗ್ರಂಥವಾಚನದಿಂದ ಪ್ರಾಪ್ತವಾಗು ವುದೆಂಬುದಾಗಿ ಆತ ಭಾವಿಸಿದ್ದ. ಐನ್‌ಸ್ಟೈನರ ಧಾರ್ಮಿಕ ನಂಬಿಕೆಗಳನ್ನು ಕುರಿತ ಒಂದು ಪ್ರಬಂಧವನ್ನು ಉಲ್ಲೇಖಿಸುತ್ತ, ಅವರ ನಿಷ್ಕೃಷ್ಟತೆಯ ಬಗೆಗೆ ಸಂದೇಹ ವ್ಯಕ್ತಪಡಿಸಿದ. ರೂಪ್ಯಕ ಮತಧರ್ಮದ[31] ವಿವಿಧ ಮುಃಖಗಳನ್ನು ಕುರಿತಂತೆ ಆತನಿಗೆ ಒಂದಿಷ್ಟು ಗೌರವವೂ ಇರಲಿಲ್ಲ. ಭಗವಂತನಿಗೆ ಹಲವು ಭಾಷೆಗಳಲ್ಲಿ ಪ್ರಾರ್ಥನೆಗಳನ್ನು ಸಲ್ಲಿಸುತ್ತಿರುವ ಕೋಟ್ಯಂತರ ಮಂದಿಯ ಪಾಪಗಳ ಲೆಕ್ಕಪತ್ರಗಳನ್ನು ಇಡಲು ಹೇಗೆ ಭಗವಂತ ಗುಮಾಸ್ತರ ಒಂದು ದಂಡನ್ನೇ ನಿಯೋಗಿಸಬೇಕಾದೀತೆಂದು ಗೇಲಿ ಮಾಡಿದ. ಇಟಲಿ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿಯ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳನ್ನು ಚರ್ಚಿಸುತ್ತ—ಈ ಚರ್ಚೆಯ ವಿವರ ಕೊಡಲು ಇಲ್ಲಿ ಜಾಗ ಏನೂ ಸಾಕಾಗದು—ಆತ ಈ ಪತ್ರವನ್ನು ಮುಕ್ತಾಯಗೊಳಿಸಿದ್ದ. ಇದರ ಜೊತೆಗೆ ಒಂದು ಚೆಕ್ಕನ್ನು ಕೂಡ ಲಗತ್ತಿಸಿದ್ದ. ತಮಗೆ ಇಷ್ಟಬಂದ ಯಾವುದೇ ಸೇವಾಕಾರ್ಯಕ್ಕೆ ಐನ್‌ಸ್ಟೈನ್ ಅದನ್ನು ವಿನಿಯೋಗಿಸ ಬಹುದೆಂಬುದು ಆತನ ಅಭೀಪ್ಸೆ.

೧೯೫೪ರ ಮಾರ್ಚ್ ೨೪ರಂದು ಐನ್‌ಸ್ಟೈನ್ ಇಂಗ್ಲಿಷಿನಲ್ಲಿ ಈ ತೆರನಾಗಿ ಮಾರೋಲೆ ಬರೆದರು :

ನನಗೆ ರಾಶಿ ಕಾಗದಗಳು ನೂರುಗಟ್ಟಲೆ ಬರುತ್ತವೆ. ಆದರೆ ನಿಮ್ಮ ಕಾಗದದಷ್ಟು ಕುತೂಹಲಕಾರಿ ಆದಂಥವು ಅತಿವಿರಳ. ನಮ್ಮ ಸಮಾಜವನ್ನು ಕುರಿತ ನಿಮ್ಮ ಅಭಿಪ್ರಾಯಗಳು ಸಕಾರಣವಾಗಿವೆಯೆಂದು ಭಾವಿಸಿದ್ದೇನೆ.

ನನ್ನ ಧಾರ್ಮಿಕ ನಂಬಿಕೆಗಳ ಬಗೆಗೆ ನೀವು ಓದಿದ್ದು ಶುದ್ಧಾಂಗ ಸುಳ್ಳೆಂಬುದು ಕಂಡಂತೆಯೇ ಇದೆ. ವ್ಯವಸ್ಥಿತವಾಗಿ ಈ ಸುಳ್ಳನ್ನು ಮತ್ತೆ ಮತ್ತೆ ಗಿಡಿಯಲಾಗುತ್ತಿದೆ. ವೈಯಕ್ತಿಕ ದೇವರನ್ನು ನಾನು ನಂಬುವುದಿಲ್ಲ. ನನ್ನ ಈ ಸ್ಪಷ್ಟನಿಲವನ್ನು ನಾನೆಂದೂ ನಿರಾಕರಿಸಿಲ್ಲ ಮಾತ್ರವಲ್ಲ, ಇದನ್ನು ಖಚಿತವಾಗಿ ವ್ಯಕ್ತಪಡಿಸಿಯೂ ಇದ್ದೇನೆ. ನನ್ನಲ್ಲಿ ಧಾರ್ಮಿಕವೆಂದು ಪರಿಗಣಿಸಬಹುದಾದ ಏನಾದರೊಂದು ಇರುವುದಾದರೆ ಅದು ಈ ವಿಶ್ವರಚನೆಯನ್ನು ಕುರಿತು ನಮ್ಮ ವಿಜ್ಞಾನ ವಿವರಿಸಬಲ್ಲಷ್ಟರವರೆಗಿನ ಅಸೀಮ ಆಶ್ಚರ್ಯ ಮಾತ್ರ.

ನೀವು ಕಳಿಸಿರುವ ಹಣವನ್ನು ಯುಕ್ತ ಪರಿಗ್ರಾಹಿಗೆ ತಲಪಿಸಲು ತಕ್ಕುದಾದ ಏರ್ಪಾಡು ನನ್ನಲ್ಲಿಲ್ಲ. ಹೀಗಾಗಿ ಅದನ್ನು ನಿಮಗೆ, ನಿಮ್ಮ ಸೌಹಾರ್ದ ಸದ್ಭಾವನೆಗಳನ್ನು ಮೆಚ್ಚುತ್ತ, ಮರಳಿಸುತ್ತಿದ್ದೇನೆ.

ಜ್ಞಾನವೆಂಬುದು ಶಾಲಾ ಠಸ್ಸೆಯನ್ನು ಟಂಕಿಸಲಾದ ನಾಣ್ಯವಲ್ಲ, ಅದರ ಗಳಿಕೆಗಾಗಿ ಬದುಕಿಡೀ ನಡೆಸುವ ಪ್ರಯತ್ನ—ಈ ಅಂಶ ಕೂಡ ನಿಮ್ಮ ಪತ್ರದಿಂದ ನನಗೆ ವೇದ್ಯವಾಗಿದೆ. ●.

ಐನ್‌ಸ್ಟೈನ್ ೧೯೩೦ ಸೆಪ್ಟೆಂಬರಿನಲ್ಲಿ ಸ್ಟುಟ್‌ಗರ್ಟ್ ಎಂಬಲ್ಲಿಗೆ ಉಪನ್ಯಾಸ ನೀಡಲು ಹೋಗಿದ್ದರು. ಅಲ್ಲಿ ಇವರು ತಂಗಿದ್ದಾಗ ಇವರ ಹೆಂಡತಿ ಎಲ್ಸಾ[32] ತಮ್ಮ ಎಲ್ಲ ಜ್ಞಾತಿಗಳನ್ನೂ ವಿಹಾರಯಾತ್ರೆಗೆ ಆಮಂತ್ರಿಸಿದ್ದರು. ಆದರೆ ದುರದೃಷ್ಟವಶಾತ್ ಅವರ ಪುಟ್ಟಮಕ್ಕಳನ್ನು ಕರೆಯಲು ಮರೆತಿದ್ದರು. ಎಂಟು ವರ್ಷ ವಯಸ್ಸಿನ ನೀ ಈ ಪುಟಾಣಿಗಳ ಪೈಕಿ ಒಬ್ಬಳು. ಈ ಹುಡುಗಿ ಸುಹಾಸಪ್ರಜ್ಞೆ ಇದ್ದವಳೆಂದು ತಿಳಿದಿದ್ದ ಐನ್‌ಸ್ಟೈನ್ ಲಘುವಿನೋದ ಒಕ್ಕಣೆಯ ಒಂದು ಪೋಸ್ಟ್ ಕಾರ್ಡನ್ನು ಇವಳಿಗೆ ೧೯೩೦ ಸೆಪ್ಟೆಂಬರ್ ೩೦ರಂದು ಬರೆದರು. ಇದು ಈ ಹುಡುಗಿಗೆ ತುಂಬ ಹಿಡಿಸಿತು—ಎಂದೇ ಅದು ಇಂದಿಗೂ ಉಳಿದಿದೆ:

● ಪ್ರಿಯ ಕುಮಾರಿ ನೀ

ನಿನ್ನ ಮಾವ ಐನ್‌ಸ್ಟೈನ್ ಎಂಬಾತನನ್ನು ನೋಡಲಾಗದಿದ್ದುದಕ್ಕೆ ನೀನು ಅತೃಪ್ತಳಾಗಿರುವೆಯೆಂದು ಎಲ್ಸಾಳಿಂದ ತಿಳಿದೆ. ಅವನು ಹೇಗೆ ಕಾಣುತ್ತಾನೆ ಎಂಬುದನ್ನು ಈಗ ನಿನಗೆ ವರ್ಣಿಸುತ್ತೇನೆ: ಬಿಳಿಚಿಕೊಂಡ ಮುಸುಡು, ನೀಳಕೂದಲು ಮತ್ತು ಪುಟ್ಟ ಡೊಳ್ಳಿನ ಆರಂಭ ; ಜೊತೆಗೆ

ವಕ್ರಭಂಗಿ, ಮತ್ತು ಅವನು ಸಿಗಾರ್ ಸೇದುತ್ತಿದ್ದರೆ ಬಾಯಿಯಲ್ಲಿ ಒಂದು ಸಿಗಾರ್, ಕಿಸೆಯಲ್ಲಿ ಇಲ್ಲವೇ ಕೈಯಲ್ಲಿ ಒಂದು ಲೆಕ್ಕಣಿಕೆ. ಆದರೆ ಡೊಂಕು ಕಾಲುಗಳಾಗಲಿ ವಿಕಾರನರಹುಲಿಗಳಾಗಲಿ ಅವನಿಗಿಲ್ಲ. ಆದ್ದರಿಂದ ಅವನು ತಕ್ಕಮಟ್ಟಿಗೆ ಚೆಲುವನೇ—ಕುರೂಪಿ ಮಂದಿಯ ಕೈಗಳಲ್ಲಿ ಕರಡಿರೋಮ ಗಳಿರುವುದಿಲ್ಲವೇ, ಇಂಥವೇನೂ ಅವನ ಹಸ್ತಗಳಲ್ಲಿಲ್ಲ. ನಿನಗೆ ನನ್ನನ್ನು ನೋಡಲಾಗಲಿಲ್ಲವಲ್ಲ, ನಿಜಕ್ಕೂ ಇದು ನಷ್ಟದ ಬಾಬು.

ಪ್ರೀತಿಪೂರ್ವಕ ಶುಭಾಶಯಗಳು
ನಿನ್ನ ಮಾವ ಐನ್‌ಸ್ಟೈನ್ *

ಐನ್‌ಸ್ಟೈನರ ದೂರಸಂಬಂಧಿಯೊಬ್ಬ ಪ್ಯಾರಿಸಿನಿಂದ ೧೯೫೦ ಏಪ್ರಿಲ್ ೧೨ ರಂದು ಇವರಿಗೊಂದು ಕಾಗದ ಬರೆದು ತನ್ನ ಮಗ ಭೌತ ಮತ್ತು ರಸಾಯನ ವಿಜ್ಞಾನಗಳನ್ನು ವ್ಯಾಸಂಗಿಸುವ ಸಲುವಾಗಿ ಇನ್ನೇನು ವಿಶ್ವವಿದ್ಯಾಲಯವನ್ನು ಪ್ರವೇಶಿಸಲಿರುವನೆಂದೂ ತಮ್ಮ ಕುಟುಂಬದ ಅತ್ಯಂತ ಪ್ರಸಿದ್ಧ ವ್ಯಕ್ತಿ ಆಗಿರುವ ಐನ್‌ಸ್ಟೈನರಿಂದ ನಾಲ್ಕು ಮಾತುಗಳನ್ನು ಪಡೆಯಲು ಉತ್ಸುಕನಾಗಿರುವನೆಂದೂ ತಿಳಿಸಿದ.

ಇದಕ್ಕೆ ಮಾರೋಲೆಯನ್ನು ಐನ್‌ಸ್ಟೈನ್ ೧೯೫೦ ಮೇ ೧೮ರಂದು ಈ ಮುಂದಿನಂತೆ ಅಂತ್ಯಪ್ರಾಸವಿರುವ ಪಂಕ್ತಿಗಳಿಂದ ತೊಡಗಿದರು:

> * ವಸ್ತುಸ್ಥಿತಿಯಂ ಗಮನಿಸಿದೊಡೆ ಬಲು ಮುಜಗರಗೊಳ್ಳುದು ನನ್ನ ಮನಂ
> ನಾನು ಪುರೋಹಿತನಾಗಿರೆ ನೀಡಿರ್ಪೆನ್ ಮುದದಿಂ ಮಂಗಳ ವಚನಂ

ಇದು ಹಾಗಿರಲಿ. ನಿಮ್ಮ ಸಮಾಚಾರ ತಿಳಿದು ನನಗೆ ಸಂತೋಷವಾಗಿದೆ. ಭೌತವಿಜ್ಞಾನದ ಅಧ್ಯಯನ ನಿಮ್ಮ ಮಗನ ಆಸಕ್ತ ಕ್ಷೇತ್ರವೆಂದು ತಿಳಿಯಿತು. ಆದರೆ ಒಬ್ಬಾತ ತೀರ ಮೇಲುಪದರದ ಫಲಿತಾಂಶಗಳಿಂದ ತೃಪ್ತನಾಗುವುದಿಲ್ಲವಾದಲ್ಲಿ ಇದೊಂದು ಕಠಿಣ ಮಾರ್ಗವೆಂಬುದಾಗಿ ನಿಮಗೆ ತಿಳಿಸದಿರಲಾರೆ. ಒಬ್ಬನ ಆಂತರಿಕ ತುಮುಲಗಳನ್ನು ಆತನ ಜೀವನವೃತ್ತಿಯಿಂದ ಸಾಧ್ಯವಾಗುವಷ್ಟರಮಟ್ಟಿಗೂ ಬೇರ್ಪಡಿಸುವುದು ಅತ್ಯುತ್ತಮ ಎಂದು ನನಗನ್ನಿಸುತ್ತದೆ. ಒಬ್ಬನ ದೈನಂದಿನ ಅನ್ನವನ್ನು ಭಗವಂತನ ವಿಶೇಷ ಅನುಗ್ರಹಕ್ಕೆ ಗಂಟುಹಾಕುವುದು ಒಳ್ಳೆಯದಲ್ಲ. *

ವರ್ಷಗಳು ಸಂದವು. ಅದೇ ಸಂಬಂಧಿ ೧೯೫೪ರ ಮಾರ್ಚ್ ೧ರಂದು ಮತ್ತೊಮ್ಮೆ ಐನ್‌ಸ್ಟೈನರಿಗೆ ಕಾಗದ ಬರೆದು ಈ ನಡುವೆ ಏನು ನಡೆಯಿ

ತೆಂಬುದನ್ನು ವಿವರಿಸಿದ. ತನ್ನ ಮಗ ಐನ್‌ಸ್ಟೈನರ ಪತ್ರಕ್ಕೆ ಚೌಕಟ್ಟು ಕಟ್ಟಿಸಿ ಅದನ್ನು ಅಧ್ಯಯನ ಕೊಠಡಿಯಲ್ಲಿ ಹಾಸಿಗೆಯ ಮೇಲೆ ತೂಗ ಹಾಕಿದ್ದ. ಐನ್‌ಸ್ಟೈನರ ನುಡಿಗಳಲ್ಲಿ ನಿಜಕ್ಕೂ ಮಾಂತ್ರಿಕ ಶಕ್ತಿ ಹುದುಗಿತ್ತೆಂಬುದಾಗಿ ಆ ಸಂಬಂಧಿ ಬರೆದಿದ್ದ. ಏಕೆಂದರೆ ತನ್ನ ಮಗ ಮೊದಲ ಡಿಪ್ಲೊಮ ಪರೀಕ್ಷೆಯಲ್ಲಿ ತರಗತಿಗೇ ಪ್ರಥಮಸ್ಥಾನ ಗಳಿಸಿ ಉತ್ತೀರ್ಣನಾಗಿದ್ದ. ಆತನಿಗೇನು ಬಹುಮಾನ ಬೇಕು—ಉದಾಹರಣೆಗೆ ಸ್ಕೀ[33] ಸಾಹಸದಲ್ಲಿ ಭಾಗವಹಿಸಲು ರಜೆ ಅಥವಾ ಹಣ—ಎಂದು ಕೇಳಿದಾಗ ಆತ ಅತಿ ಸೌಮ್ಯಭಾವದಿಂದ ತನಗೆ ತನ್ನ ಸುಪ್ರಸಿದ್ಧ ರಕ್ಷಕ ಹಾಗೂ ಆದರ್ಶ ವ್ಯಕ್ತಿ ಐನ್‌ಸ್ಟೈನರ ಹಸ್ತಾಂಕಿತ ಛಾಯಾಚಿತ್ರವೊಂದು ಲಭಿಸೀತೇ ಎಂದು ಆಶಿಸಿದ್ದ. ●

ರುಜವಿಕ್ಕಿದ ಛಾಯಾಚಿತ್ರವನ್ನು ಆತನಿಗೆ ಕಳಿಸಲಾಯಿತು.

ಇಡಾಹೊ ರಾಜ್ಯದ ಒಬ್ಬ ರೈತ ೧೯೪೭ ಜುಲೈ ೧೬ರಂದು ಐನ್‌ಸ್ಟೈನರಿಗೆ ಒಂದು ಕಾಗದ ಬರೆದು ತನ್ನ ಮಗನಿಗೆ ಆಲ್ಬರ್ಟ್ ಎಂದು ಹೆಸರಿಟ್ಟಿರುವುದಾಗಿ ತಿಳಿಸಿದ. ಈ ಅಣುಗ ಬೆಳೆದು ದೊಡ್ಡವನಾಗುತ್ತಿದ್ದಂತೆ ಇವನಿಗೆ ಪ್ರೋತ್ಸಾಹದಾಯಕ 'ತಾಯಿತಿ'ಯಾಗಿ ಉಪಯೋಗಿಸಲು ಅನುಕೂಲವಾಗುವಂತೆ ಐನ್‌ಸ್ಟೈನ್ ಏನಾದರೂ ನಾಲ್ಕು ನುಡಿಗಳನ್ನು ಬರೆಯಬಹುದೇ ಎಂಬುದಾಗಿ ಆತ ಆಶಿಸಿದ್ದ. ೧೯೪೭ ಜುಲೈ ೩೦ರಂದು ಐನ್‌ಸ್ಟೈನ್ ಈ ಮುಂದಿನ ಮಾತುಗಳನ್ನು ಇಂಗ್ಲಿಷಿನಲ್ಲಿ ಬರೆದರು :

● ನಿಜಮೌಲ್ಯವಿರುವ ಯಾವುದೂ ಮಹತ್ವಾಕಾಂಕ್ಷೆಯಿಂದ ಇಲ್ಲವೇ ಕೇವಲ ಕರ್ತವ್ಯ ಪ್ರಜ್ಞೆಯಿಂದ ಉದ್ಭವಿಸದು ; ಬದಲು, ಮನುಷ್ಯರ ಮತ್ತು ವಸ್ತುಗಳ ಬಗೆಗಿನ ಪ್ರೀತಿ ಮತ್ತು ನಿಷ್ಠೆಗಳಿಂದ ಮಾತ್ರ ಹೊಮ್ಮೀತು. ●

ಆ ಸಂತುಷ್ಟ ತಂದೆ ಪುಟ್ಟ ಅಲ್ಬರ್ಟನ ಸ್ನ್ಯಾಪ್‌ಶಾಟ್ ತಸ್ವೀರನ್ನು ಲಗತ್ತಿಸುತ್ತ ತನ್ನ ಕೃತಜ್ಞತೆಯ ಕುರುಹಾಗಿ ತಾನು ಐನ್‌ಸ್ಟೈನರಿಗೆ ಒಂದು ಚೀಲ ಇಡಾಹೊ ಆಲೂಗೆಡ್ಡೆಗಳನ್ನು ಕಳಿಸುತ್ತಿರುವುದಾಗಿ ಬರೆದ. ಅದು ಭರ್ಜರಿ ಚೀಲವೇ ಆಗಿತ್ತು.

ಭಾಗಶಃ ಬ್ರಸ್ಸೆಲ್ಸಿನಲ್ಲಿ ಜಮಾಯಿಸುತ್ತಿದ್ದ ಇತಿಹಾಸಪ್ರವರ್ತಕ ಸಭಾ ಪರಂಪರೆಗಳ ದೆಸೆಯಿಂದಲೂ ಭಾಗಶಃ ಸಂಗೀತ ಸುಖದಲ್ಲಿ ಪಾಲುಗಾರ ರಾಗಿದ್ದುದರಿಂದಲೂ ಎಲ್ಲವುಗಳಿಗಿಂತ ಮಿಗಿಲಾಗಿ ಪರಸ್ಪರ ಗೌರವಭಾವ ವಿದ್ದವರಾದ್ದರಿಂದಲೂ ಐನ್‌ಸ್ಟೈನ್, ಮತ್ತು ಬೆಲ್ಜಿಯಮ್ಮಿನ ರಾಜ ಆಲ್ಬರ್ಟ್ ಹಾಗೂ ರಾಣಿ ಎಲಿಜಬೆತ್ ಇವರ ನಡುವೆ ಗಾಢಸ್ನೇಹ ಪ್ರವರ್ಧಿಸಿತು. ಇದರ ಸ್ವರೂಪ ಹೇಗಿತ್ತೆಂಬುದು ಬ್ರಸ್ಸೆಲ್ಸಿನಿಂದ ಐನ್‌ಸ್ಟೈನ್ ತಮ್ಮ ಪತ್ನಿ ಎಲ್ಸಾರಿಗೆ ೧೯೩೦ರಲ್ಲಿ ಬರೆದ ಕಾಗದದ ಈ ಮುಂದಿನ ಉದ್ಧೃತಾಂಶಗಳಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಅರಮನೆಗೆ ತಾವು ನೀಡಿದ ಒಂದು ಭೇಟಿಯನ್ನು ಐನ್‌ಸ್ಟೈನ್ ಈ ಓಲೆಯಲ್ಲಿ ಪ್ರಸ್ತಾವಿಸಿದ್ದಾರೆ:

● ಅವರು ನನ್ನನ್ನು ಹೃದಯಸ್ಪರ್ಶಿ ಆತ್ಮೀಯತೆಯಿಂದ ಸ್ವಾಗತಿಸಿದರು. ಅವರಿಬ್ಬರಂಥ ಪರಿಶುದ್ಧರೂ ಕರುಣಾವಂತರೂ ಆದ ವ್ಯಕ್ತಿಗಳು ದೊರೆಯುವುದು ಅತಿ ವಿರಳ. ಆರಂಭದಲ್ಲಿ ಸುಮಾರು ಒಂದು ಗಂಟೆ ಕಾಲ ನಾವು ಮಾತುಕತೆಗಳಲ್ಲಿ ಮಗ್ನರಾಗಿದ್ದೆವು. ತರುವಾಯ [ಒಬ್ಬಳು ಇಂಗ್ಲಿಷ್ ಸಂಗೀತಗಾರ್ತಿ ಮತ್ತು ಸಂಗೀತಬಲ್ಲ ಸಖಿ ಸಮೇತ ರಾಣಿ ಮತ್ತು ನಾನು] ಚತುಷ್ಕಗಳನ್ನೂ[34] ತ್ರಯಗಳನ್ನೂ[35] ನುಡಿಸಿದೆವು. ಇದು ಹಲವು ಗಂಟೆಗಳ ತನಕ ಉಲ್ಲಾಸಭರಿತವಾಗಿ ಸಾಗಿತು. ಬಳಿಕ ಅವರೆಲ್ಲರ ನಿರ್ಗಮನ. ಉಳಿದವನು ನಾನೊಬ್ಬನೇ ರಾಜನ ಜೊತೆ ಭೋಜನಕ್ಕೆ. ಸಸ್ಯಾಹಾರದ ಬಗೆ. ಆಳುಗಳಿರಲಿಲ್ಲ. ಬಸಳೆ ಮತ್ತು ಕರಿದ ಮೊಟ್ಟೆ ಹಾಗೂ ಆಲೂಗೆಡ್ಡೆ. ಕಾಯಬೇಕಾಯಿತು. (ನಾನು ತಂಗಿಯೇನೆಂದು ಅವರು ನಿರೀಕ್ಷಿಸಿರಲಿಲ್ಲ.) ನನಗೆ ಈ ವಾತ್ಸಲ್ಯ ತುಂಬ ಇಷ್ಟವಾಯಿತು. ಈ ಭಾವನೆ ಪರಸ್ಪರವೆಂಬುದು ಸ್ಪಷ್ಟ. ●

ಜರ್ಮನಿಯಲ್ಲಿದ್ದ ಐನ್‌ಸ್ಟೈನರಿಗೆ ರಾಣಿ ಎಲಿಜಬೆತ್ ೧೯೩೨ ಜುಲೈ ೩೦ರಂದು ಬರೆದ ಒಂದು ಪತ್ರದ ಜೊತೆಗೆ ತಾನು ತೆಗೆದಿದ್ದ ಐನ್‌ಸ್ಟೈನರ ಛಾಯಾಚಿತ್ರಗಳನ್ನು ಲಗತ್ತಿಸಿದ್ದಳು. ಇವರೊಡನೆ ಸಂಭಾಷಿಸುತ್ತ, ಆ ಉದ್ಯಾನವನದಲ್ಲಿ ಅಡ್ಡಾಡಿದ್ದು ತನಗೆಷ್ಟು ಹರ್ಷದಾಯಕವಾಗಿತ್ತು ಎಂದು ವಿವರಿಸುತ್ತ ಆಗ ಇವರು ಕಾರಣತಾ ಹಾಗೂ ಸಂಭಾವ್ಯತಾ ಸಿದ್ಧಾಂತಗಳ[36] ಬಗೆಗೆ ನೀಡಿದ ಸ್ವಚ್ಛವಿವರಣೆಯನ್ನು ತಾನು ಮರೆತಿಲ್ಲವೆಂದು ಈ ಕಾಗದ

ದಲ್ಲಿ ಬರೆದಿದ್ದಳು. ೧೯೩೨ ಸೆಪ್ಟೆಂಬರ್ ೧೯ರಂದು ಐನ್‌ಸ್ಟೈನ್ ಭಾಗಶಃ ಹೀಗೆ ಉತ್ತರಿಸಿದರು :

● ಭೌತವಿಜ್ಞಾನ ನಮ್ಮೆದುರು ಸವಾಲೆಸೆದಿರುವ ಆ ದಿಗ್ಭ್ರಮೆಕಾರಕ ನಿಗೂಢರಹಸ್ಯಗಳನ್ನು ನಿಮಗೆ ವಿವರಿಸುವ ಕಾರ್ಯ ನನಗೆ ಮುದನೀಡಿತು. ವಾಸ್ತವತೆ ಮಾರಾಂತು ಎದುರು ನಿಂತಾಗ ತನ್ನ ಬುದ್ಧಿವಂತಿಕೆ ಆದೆಷ್ಟು ಪೂರ್ತಿ ಅಸಮರ್ಪಕ ಎಂಬುದನ್ನು ಖಚಿತವಾಗಿ ಅರಿಯಬಲ್ಲಷ್ಟು ಬುದ್ಧಿವಂತಿಕೆ ಮಾತ್ರ ಮಾನವವ್ಯಕ್ತಿಯಾಗಿ ಒಬ್ಬಾತನಿಗೆ ಇರುವುದಾಗಿದೆ. ಈ ವಿನೀತತೆಯನ್ನು ಪ್ರತಿಯೊಬ್ಬನಿಗೂ ಮುಟ್ಟಿಸುವುದು ಸಾಧ್ಯವಾದಲ್ಲಿ ಆಗ ಮಾನವಚಟುವಟಿಕೆಗಳ ಪ್ರಪಂಚ ಇನ್ನಷ್ಟು ಆಕರ್ಷಕವಾಗುತ್ತದೆ. ●

ಕ್ಯಾಲಿಫೋರ್ನಿಯದ ಸಂತ ಬಾರ್ಬರದಿಂದ ಐನ್‌ಸ್ಟೈನ್ ೧೯೩೧ ಫೆಬ್ರುವರಿ ೯ರಂದು ರಾಣಿಗೆ ಬರೆದ ಕಾಗದ :

● ಪ್ರಪಂಚದ ಈ ಕಾರ್ಯಮುಕ್ತ ಮೂಲೆಯಲ್ಲಿ ನಾನು ಈ ಎರಡು ದಿವಸ ಕಳೆದಿದ್ದೇನೆ. ಇಲ್ಲಿ ಗಾಳಿ ಚಲಿಸದು, ಸೆಖೆ ಸುಳಿಯದು, ಕುಳಿರು ಕೊರೆಯದು. ನಿನ್ನೆ ತಾನೇ ನನಗೊಂದು ಕನಸಿನ ಅರಮನೆಯನ್ನು (ಹೆಸರು ಪೂರ್ಣಾನಂದ) ತೋರಿಸಲಾಯಿತು. ಹಲವು ವರ್ಷಗಳ ಹಿಂದೆ ನೀವು ಈ ಮಂದಿರದಲ್ಲಿ ಕೆಲವೊಂದು ಶಾಂತ ಸುಂದರ ದಿವಸಗಳನ್ನು ಕಳೆದಿದ್ದಿರೆಂದು ತಿಳಿದೆ.

ವ್ಯಾಘಾತಗಳ ಮತ್ತು ವಿಸ್ಮಯಗಳ ಈ ನಾಡಿಗೆ ನಾನು ಬಂದು ಈಗ ತಿಂಗಳುಗಳು ಸಂದಿವೆ. ಒಬ್ಬಾತ ಇಲ್ಲಿ ಮೆಚ್ಚುಗೆ ಮತ್ತು ತಲೆಯಾಡಿಕೆ ನಡುವೆ ತೊನೆಯುತ್ತಿರುವನು. ತನ್ನ ಸಮಸ್ತ ಸಮಸ್ಯೆ ಹಾಗೂ ವೇದನೆಗಳ ಸಹಿತವಾದ ಹಳೆ ಯೂರೊಪಿಗೆ ಆತ ಬಂಧಿತನಾಗಿರುವನೆಂಬುದಾಗಿ ಆತನಿಗೆ ವೇದ್ಯವಾಗುತ್ತಿರುವಂತೆಯೇ ವರ್ತಮಾನಕ್ಕೆ ಆತ ಸಂತೋಷದಿಂದ ಹಿಂತಿರುಗುತ್ತಿರುವನು. ●

ಎರಡು ವರ್ಷಾನಂತರ ೧೯೩೩ ಫೆಬ್ರುವರಿ ೧೯ರಂದು, ಪುನಃ ಸಂತ ಬಾರ್ಬರದಿಂದ, ಐನ್‌ಸ್ಟೈನ್ ರಾಣಿಗೆ ಕಿರುರೆಂಬೆಯೊಂದನ್ನು ಕಳಿಸುತ್ತ ಒಂದು ಚೌಪದಿ ಬರೆದರು. ಅದರ ಅನುವಾದ:

● ವಿಕಸಿಸಿಹುದೀ ಪವಿತ್ರೋದ್ಯಾನದಲ್ಲೊಂದು
ಮರವಿದನು ಮುದದಿಂದ ನೆಟ್ಟವರು ನೀವಂದು
ಗೌರವವನರ್ಪಿಸಲು ನಿಮಗೆ ಕಳಿಸುತಿದೆ ಮರ
ಹಸುರು ಕುಡಿ, ಸ್ವೀಕರಿಸಿ—ಕೀಳಲಾಗದು ಬೇರ ! ●

ಲೀಕನ್ನಿನಲ್ಲಿದ್ದ ಅರಮನೆಯಿಂದ ರಾಣಿ ೧೯೩೩ ಮಾರ್ಚ್ ೧೫ರಂದು ಇದೇ ಧಾಟಿಯಲ್ಲಿ ಮಾರೋಲೆ ಬರೆದಳು. ಆ ವೇಳೆಗೆ ನಾಟ್ಸಿಗಳು ಅಧಿಕಾರ ಕಬಳಿಸಿ ಐನ್‌ಸ್ಟೈನರ ಹಣವನ್ನು ನುಂಗಹಾಕಿದ್ದರು. ಅಲ್ಲದೆ ವ್ಯಾಪಕವಾಗಿ ಇವರನ್ನು ದೂಷಿಸಿ ಅಪಪ್ರಚಾರ ಮಾಡುವುದರಲ್ಲಿ ಮಗ್ನರಾಗಿದ್ದರು. ತಾನು ಬರೆದ ಕಗ್ಗದ ಕೊನೆಯ ಸಾಲುಗಳಲ್ಲಿ ರಾಣಿ ಈ ಸಂಗತಿಯನ್ನು ಧ್ವನಿಸುತ್ತ *Einstein ಪದದ ಮೇಲೆ ಶ್ಲೇಷಾರ್ಥ ಕಟ್ಟುತ್ತಾಳೆ. ಅದನ್ನು ಎರಡು ಪದ ಗಳಾಗಿ—Ein Stein—ಒಡೆದಾಗ ಇದರ ಅರ್ಥ 'ಏಕಶಿಲೆ' ಎಂದಾಗುತ್ತದೆ. ರಾಣಿ ಬರೆದುದರ ಅನುವಾದವಿಲ್ಲಿದೆ:

ನೆಲೆನಿಲ್ಲಬೇಕಾದ ಮರದ ಶುಭ ಕಾಮನೆಯ
ಒಯ್ಯು ತಂದಿದೆ ರೆಂಬೆ ! ನೇಹಿಗನ ಮೃದುಹೃದಯ
ಕೀದಾದ ರೆಂಬೆಯುಲಿ ಹಿರಿದಾದ ತೋಷವನು
ಸೆರೆವಿಡಿದು ಸಲ್ಲಿಸಿದೆ—ಆನಂದ ಘೋಷವನು
ಸಾರಿಪೇಳುವೆ ನಾನು ಹಾರ್ದಿಕ ಕೃತಜ್ಞತೆಯ—
ಓ ಬೆಟ್ಟ ಬಾನುಗಳೆ ಕಡಲುಗಳೆ ! ನನ್ನ ನಯ
ನುಡಿಗಳನು ಕೇಳಿ: ಕಲ್ಲುಗಳಿಂದು ನಡುಗುತಿವೆ
'ಏಕ ಶಿಲೆ' ಕದಲದಿರಲೆಂದು ನಾ ಪ್ರಾರ್ಥಿಸುವೆ

ಜನವರಿ ೧೯೩೪. ಪ್ರಿನ್‌ಸ್ಟನ್ನಿನಲ್ಲಿ ಸುರಕ್ಷಿತರಾಗಿ ನೆಲಸಿದ್ದ ಐನ್‌ಸ್ಟೈನ್ ದಂಪತಿಗಳು ಅಮೆರಿಕದ ಅಧ್ಯಕ್ಷ ಮತ್ತು ಶ್ರೀಮತಿ ರೂಸ್ವೆಲ್ಟ್ ಅವರ ಅತಿಥಿ ಗಳಾಗಿ ಶ್ವೇತಭವನಕ್ಕೆ ಹೋಗಿದ್ದರು. ಮಾತುಕತೆ ವೇಳೆ ರಾಣಿಯ ಬಗೆಗೆ ಮಧುರಸ್ಮೃತಿಗಳನ್ನು ಮೆಲುಕುಹಾಕಿದರು. ಆಕೆಗೆ ತಮ್ಮ ಈ ಸದ್ಭಾವನೆ ಗಳನ್ನು ತಿಳಿಯಪಡಿಸಬೇಕೆಂಬುದು ಐನ್‌ಸ್ಟೈನರ ಆಶಯ. ಎಂದೇ ಅಧ್ಯಕ್ಷ ರನ್ನು ಕೊಂಡಾಡುವ ಈ ಮುಂದಿನ ಪದ್ಯವನ್ನು ಬರೆದರು,. ತಾರೀಕು ೨೫ ಜನವರಿ ೧೯೩೪. ಇದನ್ನು ಶ್ವೇತಭವನದ ಸಾದಿಲ್ವಾರಿನಲ್ಲಿ ರಾಣಿಗೆ ರವಾ ನಿಸಲಾಯಿತು. ಅಲ್ಪಸ್ವಲ್ಪ ಬದಲಾವಣೆ ಮಾಡಿ ಆ ಸಾಲುಗಳ ಅನುವಾದ ವನ್ನು ಇಲ್ಲಿ ಕೊಟ್ಟಿದೆ:

● ರಾಜಧಾನಿಯ ಸಂಭ್ರಮದ ನೆಲೆ
ಯಲ್ಲಿ ವಿಧಿ ಬರೆಯುತಿದೆ ನವ ಕತೆ
ಅಲ್ಲಿ ಕುಳಿತಿಹ ಜನರ ನಾಯಕ
ಸಂಕಟಕೆ ಪರಿಹಾರದಾಯಕ

ಹಿಂದಿನಿರುಳಲಿ ನಿಮ್ಮ ನೆನೆದೆವು
ಸಂತಸದಿ ಗುಣಗಾನಗೈದೆವು
ನಮ್ಮ ಭೇಟಿಯು ಸಿಹಿ ವಿಶೇಷಕೆ
ಪ್ರಾಸ ಪಂಕ್ತಿಗಳಿದೆಕೊ ಕಾಣಿಕೆ !

೧೯೩೩ರಲ್ಲಿ ಐನ್‌ಸ್ಟೈನ್‌ದಂಪತಿಗಳು ಪ್ಯಾಸಡೀನದಿಂದ ಯೂರೊಪಿಗೆ ಮರಳಿದರು. ಅದೇ ತರುಣದಲ್ಲಿ ನಾಟ್ಸಿಗಳು ಜರ್ಮನಿಯಲ್ಲಿ ಅಧಿಕಾರ ಕಸಿದುಕೊಂಡರು. ಆಗ ಐನ್‌ಸ್ಟೈನ್‌ದಂಪತಿಗಳು ಆಟ್ಲಾಂಟಿಕ್ ಸಾಗರದ ಪುಟ್ಟ ತಂಗುದಾಣ ಲೆ ಕಾಕ್-ಸರ್ಮರ್ ಎಂಬಲ್ಲಿ ಆಸರೆ ಪಡೆದದ್ದು ಕೇವಲ ಆಕಸ್ಮಿಕವಲ್ಲ. ಏಕೆಂದರೆ ಲೆ ಕಾಕ್ ಬೆಲ್ಜಿಯಮ್ಮಿಗೆ ಸೇರಿದ ನೆಲೆ. ಆಲ್ಬರ್ಟ್ ದೊರೆ ಮತ್ತು ಎಲಿಝಬೆತ್ ರಾಣಿ ಇಬ್ಬರಿಗೂ ಐನ್‌ಸ್ಟೈನರ ಸುರಕ್ಷಣೆಯ ಬಗ್ಗೆ ತೀವ್ರ ಕಳವಳ ಉಂಟಾಯಿತು. ನಾಟ್ಸಿಗಳು ಐನ್‌ಸ್ಟೈನರ ತಲೆ ಮೇಲೆ ಭಾರೀ ಮೊತ್ತದ ಬಹುಮಾನ ಘೋಷಿಸಿದ್ದರೆಂಬ ಸುದ್ದಿ ದಟ್ಟವಾಗಿ ಹಬ್ಬಿತ್ತು. ಹೀಗಾಗಿ ಐನ್‌ಸ್ಟೈನರನ್ನು ಹಗಲೂ ಇರುಳೂ ಕಾವಲು ಕಾಯಲು ಇಬ್ಬರು ಅಂಗರಕ್ಷಕರನ್ನು ದೊರೆ ನೇಮಿಸಿದ್ದ.

ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನ್, ಎಲಿಝಬೆತ್ ರಾಣಿಗೆ ಬರೆದ ಈ ಮುಂದಿನ ಕಾಗದ ಸ್ವಲ್ಪ ದಿವಸಗಳ ತರುವಾಯದ್ದು. ಇದರಲ್ಲಿ ಇವರ ಸ್ನೇಹ ಸ್ವಭಾವದ ಇನ್ನೂ ಒಂದು ಮಗ್ಗುಲಿನ ಸ್ಥೂಲದರ್ಶನ ನಮಗೆ ಒದಗುತ್ತದೆ. 'ಬರ್ಜಾನ್ಸ್ಕೀ ದಂಪತಿಗಳ' ಬಗ್ಗೆ ಈ ಕಾಗದ ಪ್ರಸ್ತಾವಿಸುತ್ತದೆ: ಐನ್‌ಸ್ಟೈನರ ಮಿತ್ರರಾಗಿದ್ದ ಶ್ರೀ ಮತ್ತು ಶ್ರೀಮತಿ ಬರ್ಜಾನ್ಸ್ಕೀಯವರು ಬೆಲ್ಜಿಯಮ್ಮಿನ ರಾಜದಂಪತಿಗಳ ಮಿತ್ರರು ಕೂಡ ಹೌದು. ವಾಸ್ತವವಾಗಿ ಶ್ರೀಮಾನ್ ಬರ್ಜಾನ್ಸ್ಕೀ ರಾಣಿಯ ಚತುಷ್ಕದಲ್ಲಿ ಚೆಲ್ಲೊ ವಾದ್ಯ ನುಡಿಸುತ್ತಿದ್ದರು, ಶಿಲ್ಪಿಯಾಗಿದ್ದ ಶ್ರೀಮತಿ ಬರ್ಜಾನ್ಸ್ಕೀ ರಾಣಿಗೆ ಶಿಲ್ಪಕಲೆಯ ಪಾಠ ಬೋಧಿಸುತ್ತಿದ್ದರು. ಈ ದಂಪತಿಗಳ ರಾಯಭಾರಿತ್ವದ ಪರಿಣಾಮವಾಗಿ ಐನ್‌ಸ್ಟೈನ್ ಈ ಕಾಗದವನ್ನು ಬರೆದದ್ದಾಗಿದೆ. ಆಗಿನ ಸನ್ನಿವೇಶವಿದು: ೧೯೩೪ರ ವಸಂತದಲ್ಲಿ ದೊರೆ ಗಿರಿ ಏರುತ್ತಿದ್ದಾಗ ಕಾಲುಜಾರಿ ಮೃತ್ಯುಕೂಪದಲ್ಲಿ ಸಮಾಧಿಗೊಂಡಿದ್ದ. ಹೊಸ ರಾಣಿ ಆ್ಯಸ್ಟ್ರಿಡ್—ಈಕೆ ಎಲಿಝಬೆತಳ ಸೊಸೆ—ಅದೇ ಮುಂದಿನ ವರ್ಷದ ಬೇಸಗೆಯ ಕೊನೆ ದಿನಗಳಂದು ವಾಹನ ಅಪಘಾತದಲ್ಲಿ ಮಡಿದಿದ್ದಳು. ಈಕೆಯ ವಯಸ್ಸು ಮೂವತ್ತು. ಬರಸಿಡಿಲಿನಂತೆ ಬಡಿದೆರಗಿದ ಈ ಎರಡು ಆಘಾತಗಳು ಎಲಿಝಬೆತಳನ್ನು ಪೂರ್ತಿ ಹದ

ಗೆಡಿಸಿ ಭಾವಶೂನ್ಯಸ್ಥಿತಿಗೆ ಕೆಡವುಬಿಟ್ಟಿದ್ದುವು. ಚತುಷ್ಕದೊಂದಿಗೆ ವಾದ್ಯ ನುಡಿಸುವುದಾಗಲಿ ಶಿಲೆಯ ಮೇಲೆ ಚಾಣ ಹೊಡೆಯುವುದಾಗಲಿ ಇವಳಿಗೆ ಸಾಧ್ಯವಾಗುತ್ತಿರಲಿಲ್ಲ. ರಾಣಿಯ ಪರಿವಾರದಲ್ಲಿ ಇವಳ ಈ ಸ್ಥಿತಿ ತುಂಬ ಕಳವಳ ಉಂಟುಮಾಡಿತ್ತು.

ಶ್ರೀಮತಿ ಬರ್ಜಾನ್ಸ್ಕೀ ಈ ಸನ್ನಿವೇಶವನ್ನು ಐನ್‌ಸ್ಟೈನರಿಗೆ ವಿವರಿಸುತ್ತ ರಾಣಿಗೆ ಇವರೊಂದು ಸಾಂತ್ವನಪತ್ರ ಕಳಿಸಿದರಾದೀತೆಂದು ಆಶಿಸಿದಳು. ಐನ್‌ಸ್ಟೈನ್ ಬರೆದ ಕಾಗದದ ತಾರೀಕು ಮಾರ್ಚ್ ೨೦. ಇದರಲ್ಲಿ ಇಸವಿ ಉಲ್ಲೇಖಿತವಾಗಿರದಿದ್ದರೂ ಹೆಚ್ಚಿನ ಮಟ್ಟಿಗೆ ಅದು ಸಾವಿರದೊಂಬೈನೂರ ಮೂವತ್ತಾರೇ ಆಗಿರಬೇಕು :

● ಪ್ರಿಯರಾಣಿ

ಇಂದು ಮೊದಲಬಾರಿಗೆ ಎಳೆ ವಸಂತದ ಹೊಬಿಸಿಲು ಎಲ್ಲೆಲ್ಲೂ ನಳಿನಳಿಸ ತೊಡಗಿದೆ. ನನ್ನಂಥವರು ವೈಜ್ಞಾನಿಕ ಕಾರ್ಯದಲ್ಲಿ ಪೂರ್ಣ ಮಗ್ನರಾಗಿರು ವಾಗ ಲೀನವಾಗುವ ಸ್ವಪ್ನಸದೃಶ ಸಮಾಧಿಸ್ಥಿತಿಯಿಂದ ಈ ಬಿಸಿಲು ನನ್ನನ್ನು ನೈದಡವಿ ತಿಳಿದೆಬ್ಬಿಸಿದೆ. ಸಂದ ದಿನಗಳ ಅಧಿಕ ವರ್ಣಮಯ ಮಧುರ ಸ್ಮರಣೆಗಳು ಮರುಕೊಳಿಸುತ್ತಿವೆ. ಜೊತೆಗೆ ಬ್ರಸ್ಸೆಲ್ಸಿನಲ್ಲಿ ಕಳೆದ ಸವಿ ಗಳಿಗೆ ಗಳ ಮೃದುನೆನಪುಗಳು ಕೂಡ.

ಸ್ವತಃ ಬದುಕುವುದೇ ಹೇಗೆ ನಿಮಗೆ ನರಕಸದೃಶವಾಗಿದೆ, ಮತ್ತು ವರ್ಣನಾತೀತ ಕಠೋರ ಕುಠಾರಾಘಾತಗಳಿಂದ ತಾಡಿತರಾಗಿರುವ ನೀವು ಹೇಗೆ ಭಾವಶೂನ್ಯಸ್ಥಿತಿಗೆ ಕೆಡೆದಿರುವಿರಿ ಎಂಬ ಸಂಗತಿಗಳನ್ನು ಶ್ರೀಮತಿ ಬರ್ಜಾನ್ಸ್ಕೀ ತಿಳಿಸಿದ್ದಾರೆ.

ಪರಿಸ್ಥಿತಿ ಅತಿ ದಾರುಣ ನಿಜ. ಹೀಗಿದ್ದಾಗ್ಯೂ ಚಟುವಟಿಕೆಯ ಮತ್ತು ಸಂತಸದ ಬದುಕನ್ನು ಬಾಳಿ, ತಮ್ಮ ಜೀವನದ ಕರ್ತವ್ಯವನ್ನು ಪೂರ್ತಿ ಗೊಳಿಸಿ, ಅದರ ಉಚ್ಛ್ರಾಯದ ದಿನಗಳಂದೇ ನಮ್ಮನ್ನು ಅಗಲಿಹೋದ ಆ ಸಫಲಜೀವಿಗಳಿಗಾಗಿ ನಾವು ಮರುಗಬಾರದು.

ಇಳಿವಯಸ್ಸಿನವರಿಗೆ ಉಲ್ಲಾಸ ನೀಡಿ ಅವರಿಗೆ ಪುನಶ್ಚೈತನ್ಯ ಊಡಬಲ್ಲ ವಿಶೇಷ ಒಂದುಂಟು: ಅದೇ ತರುಣ ಪೀಳಿಗೆಯವರ ಚಟುವಟಿಕೆಗಳಲ್ಲಿ ಮುದ ಕಾಣುವುದು—ನಿಜ ಹೇಳುವುದಾದರೆ ಇಂದಿನ ಅಸ್ಥಿರ ದಿನಗಳರಂದು ಕರಾಳ ಮೇಘಗಳಿಂದ ಆವೃತವಾಗಿರುವ ಮುದವಿದು. ಹೀಗಿದ್ದರೂ ಯಾವಾ ಗಲೂ ಸಂಭವಿಸುವಹಾಗೆ, ವಸಂತ ಋತುವಿನ ಸೂರ್ಯ ಹೊಸ ಬಾಳನ್ನು ತಂದೇ ತರುತ್ತಾನೆ. ಈ ನವಚೈತ್ರಾಗಮನದ ಕಾರಣವಾಗಿ ಸಂತಸ ತಳೆಯ

ಬಹುದು ಮತ್ತು ಇದರ ಅನಾವರಣವನ್ನು ತ್ವರೆಗೊಳಿಸಬಹುದು. ಇನ್ನು ಮೊರ್ಟ್ಸಾರ್ಟ್[37] ಆದರೋ ಸದಾ ಹೀಗೆಯೇ—ಸುಂದರ, ಸುಕುಮಾರ. ವಿಧಿಯ ಕಬಂಧ ಬಾಹುಗಳ ಮತ್ತು ಮಾನವನ ಸಕಲ ಭ್ರಮೆಗಳ ಹೊರಗೆ ಶಾಶ್ವತವಾಗಿ ನೆಲಸಿರುವ ಏನೋ ಒಂದು ಉಂಟೆಂಬುದಂತೂ ಕಂಡಂತೆಯೇ ಇದೆ. ಇಂಥ ಶಾಶ್ವತ ಮೌಲ್ಯಗಳು ಭಯ ಮತ್ತು ಆಶಯಗಳ ನಡುವೆ ಆಂದೋಳಿಸುತ್ತಿರುವ ಒಬ್ಬ ತರುಣನಿಗಿಂತ ವೃದ್ಧನಿಗೆ ಹತ್ತಿರವಾಗಿರುತ್ತವೆ. ಸೌಂದರ್ಯ ಮತ್ತು ಸತ್ಯ ಇವನ್ನು ಇವುಗಳ ಪರಿಶುದ್ಧ ರೂಪದಲ್ಲಿ ಅನುಭವಿಸುವ ಸೌಭಾಗ್ಯ ನಮ್ಮದಾಗಿದೆ.

ನೀವೆಂದಾದರೂ ಲಾ ರಾಶ್‌ಫ್ಯೂಕೋನ[38] ಸೂತ್ರವಿಧಿಗಳನ್ನು ಓದಿರುವಿರಾ ? ಅವು ಕಟುವಾಗಿಯೂ ವಿಷಣ್ಣವಾಗಿಯೂ ಇರುವಂತೆ ಭಾಸವಾಗುತ್ತವೆ. ಆದರೆ ಅವು ಮಾನವೀಯ ಹಾಗೂ ಪರಿಪೂರ್ಣಮಾನವೀಯ ಸ್ವಭಾವವನ್ನು ಜ್ಞೇಯನಿಷ್ಠವಾಗಿ ಪರಿಶೀಲಿಸಿ ಮುಕ್ತಿಯ ಒಂದು ವಿಚಿತ್ರಾನುಭವವನ್ನು ಪ್ರೇರಿಸುತ್ತವೆ. ಬದುಕನ್ನು ಅಡ್ಡಹಾಯಲು ನಿಸರ್ಗ ಒಬ್ಬ ವ್ಯಕ್ತಿಯ ಮೇಲೆ ಹೇರಿದ್ದ ಭವಬಂಧಗಳ ಭಾರವಾದ ಹೊರೆಯನ್ನು ಕಳಚಿ ಎಸೆಯುವುದು ಆ ವ್ಯಕ್ತಿಗೆ ಸುಲಭವಾಗಿರದಿದ್ದರೂ ಆತ ತನ್ನನ್ನು ತಾನೇ ವಿಮುಕ್ತಿಗೊಳಿಸಿಕೊಳ್ಳುವುದರಲ್ಲಿ ಯಶಸ್ಸು ಗಳಿಸುವುದನ್ನು ಲಾ ರಾಶ್‌ಫ್ಯೂಕೋನಲ್ಲಿ ಕಾಣುತ್ತೇವೆ. ತಮ್ಮ ಬಾಳದೋಣಿ ಹಲವು ಬಿರುಗಾಳಿಗಳ ಮೂಲಕ ಹಾಯ್ದಿರುವಂಥ ಜನರ ಜೊತೆಗೆ—ಉದಾಹರಣೆಗೆ ಸಹೃದಯರಾದ ಬರ್ಜಾನ್ಸ್ಕಿ ದಂಪತಿಗಳ ಜೊತೆಗೆ—ಲಾ ರಾಶ್‌ಫ್ಯೂಕೋನನ್ನು ವಾಚಿಸುವುದು ತುಂಬ ಫಲಪ್ರದವಾದೀತು. 'ಹಿರಿನೀರು'[39] ನಮ್ಮನ್ನು ಬೇರ್ಪಡಿಸಿಲ್ಲವಾಗಿದ್ದರೆ ನಾನು ಕೂಡ ಈ ಕೂಟದಲ್ಲಿ ಸಂತೋಷದಿಂದ ಭಾಗವಹಿಸಿರುತ್ತಿದ್ದೆ.

ಇದೊಂದು ದ್ವೀಪವೋ ಎಂಬಂತಿರುವ ಈ ಪ್ರಿನ್‌ಸ್ಟನ್ನಿನಲ್ಲಿ ನೆಲಸುವ ಭಾಗ್ಯವನ್ನು ವಿಧಿ ನನಗೆ ಅನುಗ್ರಹಿಸಿದೆ. ಲೇಕನ್ನಿನಲ್ಲಿರುವ ಅರಮನೆಯ ಸುಂದರ ಉದ್ಯಾನವನ್ನು ಇದು ಅನೇಕ ವಿಧಗಳಲ್ಲಿ ಹೋಲುತ್ತದೆ. ಮಾನವ ಕಲಹದ ಅವ್ಯವಸ್ಥಿತ ಘೋಷಣೆಗಳು ಈ ಪುಟ್ಟ ವಿಶ್ವವಿದ್ಯಾಲಯ ಪಟ್ಟಣವನ್ನು ಸಹ ಅಬಾಧಿತವಾಗಿ ಪ್ರವೇಶಿಸುತ್ತಿವೆ. ಇತರ ಎಲ್ಲರೂ ಹೋರಾಡುತ್ತ ಮತ್ತು ನರಳುತ್ತ ಇರುವಾಗ ನಾನು ಮಾತ್ರ ಇಲ್ಲಿಯ ಶಾಂತ ಪರಿಸರದಲ್ಲಿ ನೆಮ್ಮದಿಯಿಂದಿರುವುದು ನಾಚಿಕೆಗೇಡಿನ ಸಂಗತಿ. ಇದು ಏನೇ ಇರಲಿ. ಈಗ ಕೂಡ ಶಾಶ್ವತಮೌಲ್ಯಗಳೊಡನೆ ವ್ಯವಹರಿಸುವುದೇ

ಅತ್ಯುತ್ಕೃಷ್ಟವಾದದ್ದು. ಏಕೆಂದರೆ ಅವುಗಳಿಂದ ಮಾತ್ರ ಮನುಷ್ಯರ ಈ ಪ್ರಪಂಚದಲ್ಲಿ ಸ್ವಾಸ್ಥ್ಯವನ್ನೂ ಪ್ರಶಾಂತಿಯನ್ನೂ ಪುನಸ್ಸ್ಥಾಪಿಸಬಲ್ಲ ಮೂಲದ್ರವ್ಯ ಪ್ರವಹಿಸಬಲ್ಲದು.

ಪ್ರಸಕ್ತ ವಸಂತ ನಿಮ್ಮೆಲ್ಲರಲ್ಲೂ ಪ್ರಶಾಂತ ಹರ್ಷವನ್ನು ತುಂಬಿ ನಿಮ್ಮನ್ನು ಚಟುವಟಿಕೆಯ ಬಾಳು ನಡೆಸುವತ್ತ ಉದ್ದೀಪಿಸಿತೆಂದು ಹಾರ್ದಿಕವಾಗಿ ಆಶಿಸುತ್ತೇನೆ. ನಿಮಗೆ ಹಾರ್ದಿಕ ಶುಭಾಶಯಗಳು. ●

ಈ ಮುಂದಿನ ಬಾಬಿನ ಬಗೆಗೆ ನಮಗೆ ತಿಳಿದಿರುವುದು ಅತ್ಯಲ್ಪ. ಪ್ರಾಯಶಃ ಐನ್‌ಸ್ಟೈನ್ ಇದನ್ನು ೧೯೩೩ರ ವಸಂತ ಅಥವಾ ವಿಷುವಿನಲ್ಲಿ, ಲೀ ಕಾಕ್‌ನಲ್ಲಿದ್ದಾಗ, ಬರೆದುದಾಗಿರಬಹುದು. ಇದರಲ್ಲೊಂದು ಹುಚ್ಚಿನ ಗುಂಗು ಸುಳಿಯುತ್ತಿದೆ. ಏಕೆಂದರೆ ದೈಹಿಕ ಹಿಂಸಾಕೃತ್ಯವನ್ನು ಐನ್‌ಸ್ಟೈನ್ ಎಂದೂ ಬೆಂಬಲಿಸಿದವರಲ್ಲ:

● ಪಾಟ್ಸ್‌ಡ್ಯಾಮಿನ ಪೊಲೀಸರು ಗುಪ್ತಾಸ್ತ್ರಶೋಧನೆಗಾಗಿ ನನ್ನ ಬೇಸಗೆ ತಾಣಕ್ಕೆ ದಾಳಿ ಇಟ್ಟರೆಂಬ ಸುದ್ದಿ ಕೇಳಿದಾಗ ನನಗೆ ಏನನ್ನಿಸಿತೆಂದು ಪ್ರಶ್ನಿಸಿದ್ದೀರಿ.

ನಾಟ್ಸೀ ಪೊಲೀಸ್ ಪೇದೆಯೊಬ್ಬ ಬೇರೆನನ್ನು ತಾನೆ ಊಹಿಸಬಲ್ಲ ?

(ಈ ಮೇಲಿನ ನಿರೂಪಣೆ ಹೆಚ್ಚು ಕಡಿಮೆ ಸರಿಯಾದ ಅರ್ಥ. ಆದರೆ ಇದು ಮೂಲ ಅರ್ಥದಿಂದ ಸಾಕಷ್ಟು ಬೇರೆಯೇ ಆಗಿದೆ. ಕೊನೆಯ ಜರ್ಮನ್ ವಾಕ್ಯದ ಅಕ್ಷರಶಃ ಅನುವಾದವಿದು : "ನನಗೊಂದು ಜರ್ಮನ್ ಗಾದೆ ನೆನಪಿಗೆ ಬರುತ್ತಿದೆ : ಪ್ರತಿಯೊಬ್ಬನೂ ಆತನ ಹಾವುಗೆಗಳಿಗೆ ತಕ್ಕಂತೆ ಅಳೆಯುತ್ತಾನೆ." ಈ ಗಾದೆಯ ತಿರುಳೇನೆಂಬುದು ಸ್ಪಷ್ಟ : ನಾವು ಇತರರನ್ನು ನಮ್ಮ ಅರಿವಿನ ಬೆಳಕಿನಲ್ಲಿ ಮೌಲ್ಯಮಾಪಿಸುತ್ತೇವೆ—ನಮ್ಮಂತೆಯೇ ಅವರು ಇರಬೇಕೆಂದು ನಿರೀಕ್ಷಿಸುತ್ತೇವೆ.) ●

ಒಬ್ಬ ಅಂತರ್ಮುಖಿ ವಿದ್ಯಾರ್ಥಿಗೆ ಇಲ್ಲವೇ ಸೈದ್ಧಾಂತಿಕ ಭೌತವಿಜ್ಞಾನಿಗೆ ದೀಪಸ್ತಂಭಪಾಲಕನ ಕಾರ್ಯದಂಥ ಶಾಂತ ಮತ್ತು ಏಕಾಂಗಿ ಉದ್ಯೋಗ ಆದರ್ಶಪ್ರಾಯವಾದದ್ದೆಂಬುದಾಗಿ ಐನ್‌ಸ್ಟೈನ್ ಒಮ್ಮೆ ನುಡಿದರು. ಇವರಂಥ ಒಬ್ಬ ಮಹಾಪುರುಷನಿಗೆ ಇದು ಸಾಧ್ಯವಾದೀತು. ಆದರೆ ಇತರರು ಇಂಥ ವಿರಕ್ತ ಪರಿಸ್ಥಿತಿಗಳಲ್ಲಿ ಪ್ರವರ್ಧಿಸಿಯಾರೆಂಬ ನಂಬಿಕೆಗೆ ಆಧಾರವೇನು? ಇದು ನಮಗೆ ಜರ್ಮನ್ ಗಾದೆಯೊಂದನ್ನು ಚೆನ್ನಾಗಿ ನೆನಪಿಗೆ ತರಬಲ್ಲದು.

ಇಲ್ಲಿ ಎರಡು ಬಾಬುಗಳಿವೆ. ಪ್ರತಿಯೊಂದೂ ಅದರದೇ ರೀತಿಯಲ್ಲಿ ಐನ್‌ಸ್ಟೈನರಿಗೆ ನಾಟ್ಸೀ ದುರಾಕ್ರಮಣದ ಕರಾಳ ದಿನಗಳಂದು ಚೈತನ್ಯದಾಯಕವಾಗಿ ಇದ್ದಿರಬೇಕು.

ಐನ್‌ಸ್ಟೈನರಿಗೆ ಜರ್ಮನಿಯಲ್ಲಿದ್ದ ಆಸ್ತಿಯನ್ನು ನಾಟ್ಸಿಗಳು ಮುಟ್ಟುಗೋಲು ಹಾಕಿದ್ದರೆಂಬ ಸುದ್ದಿ ತಿಳಿದ ಡಚ್ ಖಗೋಳವಿಜ್ಞಾನಿ ಡಬ್ಲ್ಯು. ಡ ಸಿಟರ್[40] ತಮ್ಮ ಸಹೋದ್ಯೋಗಿಗಳ ಪರವಾಗಿ ಪತ್ರ ಬರೆಯುತ್ತ ಇವರಿಗೆ ಆರ್ಥಿಕ ಸಹಾಯವನ್ನು ಆಶ್ವಾಸಿಸಿದರು. ೧೯೩೩ ಏಪ್ರಿಲ್ ೫ರಂದು ಐನ್‌ಸ್ಟೈನ್ ಈ ತೆರನಾಗಿ ಮಾರೋಲೆ ಬರೆದರು :

● ಈಗಿನಂಥ ದುರ್ಧರ ಸನ್ನಿವೇಶಗಳಲ್ಲಿ ಒಬ್ಬಾತನಿಗೆ ತನ್ನ ನಿಜ ಹಿತಾಕಾಂಕ್ಷಿಗಳು ಯಾರೆಂಬುದು ಚೆನ್ನಾಗಿ ವೇದ್ಯವಾಗುತ್ತದೆ. ನೆರವು ನೀಡಲು ಮುಂಬಂದಿರುವ ನಿಮಗೆ ನನ್ನ ಹಾರ್ದಿಕ ನಮನಗಳು. ವಸ್ತುತಃ ಪರಿಸ್ಥಿತಿ ನನಗೆ ತುಂಬ ಅನುಕೂಲವಾಗಿದೆ. ನನ್ನಲ್ಲಿ ಇರುವಷ್ಟರಿಂದ ನನ್ನ ವ್ಯವಹಾರಗಳನ್ನು ಚೆನ್ನಾಗಿ ನಿರ್ವಹಿಸಬಲ್ಲೆ ಮಾತ್ರವಲ್ಲ, ಇತರರಿಗೆ ನೆರವನ್ನು ಕೂಡ ನೀಡಬಲ್ಲೆ. ಇದು ಹೇಗೂ ಇರಲಿ. ಜರ್ಮನಿಯಿಂದ ಮಾತ್ರ ಪ್ರಾಯಶಃ ನಾನು ಏನನ್ನೂ ಮರುಪಡೆಯಲಾರೆ. ಏಕೆಂದರೆ ಅಲ್ಲಿ ನನ್ನ ವಿರುದ್ಧ ತೀವ್ರ ದೇಶದ್ರೋಹಕ್ಕಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. ನಿಜಕ್ಕೂ ರಾಜಕೀಯ ಧುರೀಣರೆಲ್ಲರೂ ವಿಚಿತ್ರ ರೋಗಗ್ರಸ್ತ ವ್ಯಕ್ತಿಗಳಾಗಿರಬೇಕೆಂಬುದಾಗಿ ದೇಹವಿಜ್ಞಾನಿ ಜೇಕ್ವಿಸ್ ಲೋಯೆಬ್ ಒಮ್ಮೆ ಮಾತುಕತೆ ವೇಳೆ ನನ್ನಲ್ಲಿ ಪ್ರಸ್ತಾವಿಸಿದ್ದರು ; ಏಕೆಂದರೆ, ಇವರ ಪ್ರಕಾರ, ತನ್ನ ನಿರ್ಣಯಗಳ ಹಾಗೂ ವರ್ತನೆಗಳ ಭವಿಷ್ಯ ಪರಿಣಾಮ ಏನೆಂಬುದನ್ನು ಅರಿಯುವಲ್ಲಿ ಇಷ್ಟೊಂದು ಅಜ್ಞಾನಿ ಆಗಿರುವ ಒಬ್ಬ ಸಾಮಾನ್ಯ ವ್ಯಕ್ತಿ ಖಂಡಿತವಾಗಿಯೂ ಅಷ್ಟೊಂದು ಹೆಣಭಾರದ ಹಿರಿ ಹೊಣೆ ಹೊರಲಾರ. ಲೋಯೆಬ್ ಹೀಗೆ ಹೇಳಿದ ಸಂದರ್ಭದಲ್ಲಿ ಅದೊಂದು ಉತ್ಪ್ರೇಕ್ಷಿತೋಕ್ತಿ ಎಂದೆನ್ನಿಸಿರಬಹುದಾದರೂ ವರ್ತಮಾನ ಜರ್ಮನಿಯಲ್ಲಂತೂ ಅದು ಪೂರ್ತಿ ನಿಜ. ಒಂದೇ ಒಂದು ವಿಚಿತ್ರ ಸಂಗತಿ ಎಂದರೆ [ಜರ್ಮನಿಯಲ್ಲಿ] ಬೌದ್ಧಿಕ ಕುಲೀನರೆಂದು ನಾಮಾಂಕಿತರಾದವರ ಸಂಪೂರ್ಣ ವೈಫಲ್ಯ. ●

ಐನ್‌ಸ್ಟೈನ್ ಜರ್ಮನಿಯನ್ನು ಅಂತಿಮವಾಗಿ ತೊರೆದು ನ್ಯೂ ಜೆರ್ಸಿಯಲ್ಲಿಯ ಪ್ರಿನ್ಸ್‌ಟನ್ನಿನ ಇನ್‌ಸ್ಟಿಟ್ಯೂಟ್ ಫಾರ್ ಅಡ್ವಾನ್ಸ್ಡ್ ಸ್ಟಡಿಯನ್ನು ಪ್ರಾಧ್ಯಾಪಕರಾಗಿ ಸೇರಲು ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ ತೆರಳುವ ಆದೇ ಮೊದಲು, ೧೯೩೩ರಲ್ಲಿ, ಇಂಗ್ಲೆಂಡನ್ನು ಸಂದರ್ಶಿಸಿದಾಗ ಒಬ್ಬ ಪತ್ರಕರ್ತನಿಂದ ಅವರಿಗೊಂದು ಕಾಗದ ಬಂದಿತು. ಭೌತವಿಜ್ಞಾನದಲ್ಲಿ ಆತನ ಬುಡವೇನೂ ಭದ್ರವಾಗಿರಲಿಲ್ಲ. ಉದಾಹರಣೆಗೆ, ಆತನ ಅರಿವಿನ ಪ್ರಕಾರ, ಈ ಪ್ರಪಂಚ ಅದೆಷ್ಟು ರಭಸದಿಂದ ಧಾವಿಸುತ್ತಿದೆಯೆಂದರೆ ಇದು

5*

ಸ್ತಬ್ಧವಾಗಿದೆಯೋ ಎಂಬ ಭಾವವನ್ನು ನಮ್ಮಲ್ಲಿ ಮೂಡಿಸುತ್ತದೆ. ಮುಂದು ವರಿಯುತ್ತ, ಗುರುತ್ವದ ಕಾರಣವಾಗಿ ಒಬ್ಬ ವ್ಯಕ್ತಿ ಈ ಗೋಳರೂಪದ ಭೂಮಿಯ ಮೇಲೆ ಕೆಲವೊಮ್ಮೆ ನೆಟ್ಟಗೆ ನಿಂತಿರುತ್ತಾನೆ. ಕೆಲವೊಮ್ಮೆ ತಲೆ ಮೇಲೆ ನಿಂತಿರುತ್ತಾನೆ. ಕೆಲವೊಮ್ಮೆ ಭೂಮಿಗೆ ಬಲಕೋನಗಳಲ್ಲಿ* ಹೊರ ಚಾಚಿಕೊಂಡಿದ್ದರೆ ಇನ್ನು ಕೆಲವೊಮ್ಮೆ 'ಎಡಕೋನಗಳಲ್ಲಿ' ಚಾಚಿಕೊಂಡಿರು ತ್ತಾನೆ ಎಂದು ಮುಂತಾಗಿ ಪೂರ್ಣಗಂಭೀರ ಮನೋಭಾವದಿಂದ ಬರೆದಿದ್ದ. ಪ್ರಾಯಶಃ ವ್ಯಕ್ತಿ ಶೀರ್ಷಾಸನ ಭಂಗಿಯಲ್ಲಿ ನಿಂತಿರುವಾಗ ಪ್ರೇಮಪಾಶದಿಂದ ಬಂಧಿತನಾಗುವುದೂ ಇತರ ಮುಖ್ಯ ಕೃತ್ಯಗಳನ್ನು ಎಸಗುವುದೂ ಆಗಿರ ಬಹುದೇ ಎಂಬುದಾಗಿ ಪ್ರಶ್ನಿಸಿದ್ದ.

ಈ ಕಾಗದಕ್ಕೆ ಐನ್‌ಸ್ಟೈನ್ ಮಾರೋಲೆ ಬರೆದಿರುವಂತೆ ಕಂಡುಬರುವು ದಿಲ್ಲ. ಆದರೆ ಅದರ ಮೇಲೆ ಜರ್ಮನ್ ಭಾಷೆಯಲ್ಲಿ ಈ ಮುಂದಿನ ನುಡಿ ಗಳನ್ನು ಗೀಚಿದ್ದಾರೆ :

● ಪ್ರೇಮಪಾಶಬಂಧಿತರಾಗುವುದು ಜನರೆಸಗುವ ಅತ್ಯಂತ ಮೂರ್ಖ ಕ್ರಿಯೆ ಖಂಡಿತ ಅಲ್ಲ—ಆದರೆ ಅದಕ್ಕೆ ಗುರುತ್ವವನ್ನು ಮಾತ್ರ ಹೊಣೆ ಮಾಡಲಾಗದು. ●

ನವವಿದ್ಯಾರ್ಥಿಗಳ ಉಪಯೋಗಾರ್ಥ ಪ್ರಕಟಿಸಲಾಗುತ್ತಿದ್ದ *The Dink* ಎಂಬ ಪತ್ರಿಕೆ ಐನ್‌ಸ್ಟೈನ್ ಪ್ರಿನ್‌ಸ್ಟನ್ನಿಗೆ ಆಗಮಿಸಿದ ತರುಣದಲ್ಲಿ ಒಂದು ಸಂದೇಶವೀಯುವಂತೆ ಅವರನ್ನು ಪ್ರಾರ್ಥಿಸಿತು. ಅವರು ಬರೆದ ಈ ಮುಂದಿನ ಮಾತುಗಳನ್ನು ೧೯೩೩ ಡಿಸೆಂಬರಿನಲ್ಲಿ ಪ್ರಕಟಿಸಲಾಯಿತು :

● ಎಳೆಯ ನಗೆಬುಗ್ಗೆಗಳೇ ! ನಿಮ್ಮ ಜೊತೆ ನಲಿದಾಡುವುದು ನನಗೆ ತುಂಬ ಸಂತಸದ ಸಂಗತಿ. ಒಬ್ಬ ಹಳೆಯ ವಿದ್ಯಾರ್ಥಿ ನಿಮಗೆ ಕೆಲವು ನುಡಿ ಗಳನ್ನು ಉಸುರಬಹುದಾದರೆ ಅವು ಹೀಗಿರುತ್ತವೆ : ನಿಮ್ಮ ವ್ಯಾಸಂಗವನ್ನು ಎಂದೂ ಒಂದು ಕರ್ತವ್ಯ ಎಂಬುದಾಗಿ ಭಾವಿಸಬೇಡಿ ; ಬದಲು, ಪ್ರಜ್ಞಾ ಪ್ರಪಂಚದಲ್ಲಿ ಸೌಂದರ್ಯದ ವಿಮುಕ್ತಿಕಾರಕ ಪ್ರಭಾವ ಏನೆಂಬುದನ್ನು ತಿಳಿಯಲು ಒದಗುವ ಅಪೂರ್ವ ಸದವಕಾಶವೆಂದು ಭಾವಿಸಿ ; ಈ ಅರಿವು ವೈಯಕ್ತಿಕವಾಗಿ ನಿಮಗೆ ಆನಂದದಾಯಕವಾಗಿರುತ್ತದೆ ಮತ್ತು ಭವಿಷ್ಯ

* ಬಲಕೋನ = right angle ; ಗಣಿತದ ಪರಿಭಾಷೆಯಲ್ಲಿ ಲಂಬಕೋನ, ೯೦°—ಕನ್ನಡಾನುವಾದಕ

ದಲ್ಲಿ ನಿಮ್ಮ ಕೃತಿ ಸೇರಲಿರುವ ಸಮಾಜಕ್ಕೆ ಲಾಭದಾಯಕವಾಗಿರುತ್ತದೆ. ●

ಕ್ಯಾಲಿಫೋರ್ನಿಯದ ಒಂದು ಕಾಲೇಜಿನ ವಿದ್ಯಾರ್ಥಿನಿ ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ೧೯೫೧ ಮಾರ್ಚ್ ೨೪ರಂದು ಕಾಗದ ಬರೆದು ಅಲ್ಲಿಯ ಪುಟ್ಟ ವೇಧಶಾಲೆಯನ್ನು ಇವರಿಗೆ ಅರ್ಪಿಸಿದುದರ ನೆನಪು ಇದೆಯೋ ಎಂದು ಪ್ರಶ್ನಿಸಿದ್ದಳು. ತನ್ನ ಭವಿಷ್ಯದ ಬಗ್ಗೆ ಇವರ ಸಲಹೆ ಕೋರಿದ್ದಳು. ಅವಳಿಗೆ ಖಗೋಳವಿಜ್ಞಾನದಲ್ಲಿ ಬಲು ಹಿಂದಿನಿಂದಲೂ ಗಾಢಾಸಕ್ತಿ. ವೃತ್ತಿ ಖಗೋಳ ವಿಜ್ಞಾನಿ ಆಗಬೇಕೆಂಬುದು ಅವಳ ಅಪೇಕ್ಷೆ. ಆದರೆ ಆಕೆಯ ಇಬ್ಬರು ಅಧ್ಯಾಪಕರ ಪ್ರಕಾರ ಈಗಾಗಲೇ ಆ ಕ್ಷೇತ್ರದಲ್ಲಿ ಸಾಕಷ್ಟು ಖಗೋಳ ವಿಜ್ಞಾನಿಗಳಿದ್ದು ಅಲ್ಲಿ ಆಕೆ ಹೆಸರು ಮಾಡಬಲ್ಲಷ್ಟು ಪ್ರಖರಮತಿ ಅಲ್ಲ ಎಂದಿತ್ತು. ಗಣಿತದಲ್ಲಿ ತಾನು ಮಹಾಪ್ರತಿಭಾನ್ವಿತೆ ಏನೂ ಅಲ್ಲವೆಂದು ಒಪ್ಪಿಕೊಂಡ ಆಕೆ ಖಗೋಳವಿಜ್ಞಾನದಲ್ಲಿಯೇ ಮುಂದೆ ಸಾಗಬೇಕೇ ಅಥವಾ ಬೇರೆ ಯಾವುದನ್ನಾದರೂ ಆಯ್ದು ಮುಂದುವರಿಯಬೇಕೇ ಎಂಬುದಾಗಿ ಐನ್‌ಸ್ಟೈನರನ್ನು ಪ್ರಶ್ನಿಸಿದ್ದಳು.

ಐನ್‌ಸ್ಟೈನ್ ಇಂಗ್ಲಿಷಿನಲ್ಲಿ ಈ ಮುಂದಿನಂತೆ ಉತ್ತರ ಬರೆದರು :

● ಹೊಟ್ಟೆಪಾಡಿಗಾಗಿ ವಿಜ್ಞಾನವನ್ನು ಅವಲಂಬಿಸಬೇಕಾಗದಿದ್ದ ಪಕ್ಷದಲ್ಲಿ ಅದೊಂದು ಅದ್ಭುತ ವಿಷಯವೇ ಸರಿ. ತಾನು ಸಮರ್ಥವಾಗಿ ನಿರ್ವಹಿಸಬಲ್ಲೆನೆಂದು ಭಾವಿಸುವ ಕಾರ್ಯದ ಮೂಲಕ ವ್ಯಕ್ತಿ ತನ್ನ ಅನ್ನ ಗಳಿಸಬೇಕು. ಎಂದು ನಾವು ಯಾರಿಗೇ ಆಗಲಿ ಲೆಕ್ಕ ಒಪ್ಪಿಸಬೇಕಾಗುವುದಿಲ್ಲವೋ ಅಂದು ಮಾತ್ರ ವೈಜ್ಞಾನಿಕ ಸಾಹಸೋದ್ಯಮದಲ್ಲಿ ಸಂತೋಷ ಕಾಣುತ್ತೇವೆ. ●

ಸ್ವತಃ ಒಂದಿಷ್ಟೂ ಪರಿಚಯವಿರದಿದ್ದ ಒಬ್ಬ ವಿದ್ಯಾರ್ಥಿನಿಗೋಸ್ಕರವೇ ಐನ್‌ಸ್ಟೈನ್ ಈ ಹಿತೋಕ್ತಿಯನ್ನು ಬರೆದಿದ್ದರೆಂಬ ಭಾವನೆ ಬರಬಹುದು. ಆದರೆ ಈ ತತ್ತ್ವ ಮೂಲಭೂತವಾದದ್ದು ಮತ್ತು ಸಾರ್ವತ್ರಿಕವಾಗಿ ಅನ್ವಯಶೀಲವಾದದ್ದು ಎಂಬುದಾಗಿ ಅವರು ನಂಬಿದ್ದರು. ಒಬ್ಬಾತ ನೂತನ ಭಾವನೆಗಳನ್ನು ಉತ್ಪಾದಿಸಿಯಾನು ಎಂಬುದಾಗಿ ನಿರೀಕ್ಷಿಸಲ್ಪಡುವುದು ಎಷ್ಟು ತ್ರಾಸದಾಯಕವಾಗಬಲ್ಲದು ಎಂಬ ಸಂಗತಿ ಅವರಿಗೆ ಚೆನ್ನಾಗಿ ತಿಳಿದಿತ್ತು. ಬರ್ಲಿನ್ನಿಗೆ ಆಹ್ವಾನಿತರಾದಾಗ ಅವರು ತಮ್ಮನ್ನು ಮೊಟ್ಟೆ ಇಡುತ್ತಲೇ

ಇರಬೇಕೆಂದು ನಿರೀಕ್ಷಿಸಲಾಗುವ ಕೋಳಿಗೆ ಹೋಲಿಸಿಕೊಂಡಿದ್ದರು. ಭಾವೀ ವಿಜ್ಞಾನಿ ಅಥವಾ ವಿದ್ವಾಂಸ ತನ್ನ ಅನ್ನವನ್ನು ಮೋಚಿಯಂಥ ಫಲಾಪೇಕ್ಷೆ ರಹಿತವಾದ ದಂಧೆಯಿಂದ ಗಳಿಸುವಂತಾಗಬೇಕೆಂದು ಪದೇಪದೇ ಹೇಳು ತ್ತಿದ್ದರು. ಹೀಗಾದಾಗ ಮಾತ್ರ, ಸೃಷ್ಟಿಶೀಲ ಕಾರ್ಯದಿಂದ ಒಬ್ಬಾತನಿಗೆ ಲಭಿಸುವ ಆನಂದಕ್ಕೆ ಕುಠಾರಪ್ರಾಯವಾಗಿ, ತೀರ ಜಳ್ಳಾದ ಫಲಿತಾಂಶಗಳ ಪ್ರಕಟಣೆಗೆ ಕಾರಣವಾಗಿರುವ 'ಉತ್ಪಾದನೆ ಯಾ ಉತ್ಪಾಟನೆ' ಘೋಷಣೆ ಹೇರುವ ಒತ್ತಡ ಹಿಂಗೀತು, ಅಷ್ಟೆ. ಐನ್‌ಸ್ಟೈನರ ಪರಮಗೌರವಕ್ಕೆ ಪಾತ್ರ ನಾಗಿದ್ದ ಮಹಾತತ್ತ್ವಜ್ಞಾನಿ ಸ್ಪಿನೋಝ[41] ಹೇಗೆ ಜೀವನಯಾಪನೆ ಮಾಡುತ್ತಿದ್ದ ? ಮಸೂರ ಅರೆದು. ತಾವಾದರೂ ತುತ್ತು ಕೂಳಿಗಾಗಿ ಬರ್ನ್ ನಗರದ ಏಕಸ್ವ ಕಛೇರಿಯಲ್ಲಿ ಕೆಲಸಮಾಡುತ್ತ ತಮ್ಮ ಕೆಲವೊಂದು ಪ್ರಗಲ್ಭ ಭಾವನೆಗಳನ್ನು ಬಿತ್ತರಿಸಿದ ಸುಂದರ ದಿನಗಳ ಮಧುರ ಸ್ಮರಣೆ ಗಳನ್ನು ಐನ್‌ಸ್ಟೈನ್ ಪದೇಪದೇ ನೆನಪಿಸಿಕೊಳ್ಳುತ್ತಿದ್ದರು.

ಈ ಮುಂದಿನ ಬಾಬಾದರೂ ಇದೇ ವಿಷಯದ ಬಗ್ಗೆ ಇನ್ನಷ್ಟು ಪುರಾವೆ ಒದಗಿಸುತ್ತದೆ.

ದೆಹಲಿಯಲ್ಲಿದ್ದ ಭಾರತೀಯನೊಬ್ಬ ೧೯೫೩ ಜುಲೈ ೧೪ರಂದು ಐನ್‌ಸ್ಟೈನರಿಗೊಂದು ಕಾಗದ ಬರೆದು ಇವರ ಸಹಾಯ ಯಾಚನೆಮಾಡಿದ. ಒಂದೇ ವಿಷಯವನ್ನು ಪುನರಾವರ್ತಿಸುತ್ತಿದ್ದ ಆ ಪತ್ರದ ಸಾರಾಂಶವಿಷ್ಟು : ಪತ್ರಲೇಖಕ ಏಕಾಂಗಿ. ವಯಸ್ಸು ಮೂವತ್ತೆರಡು. ಗಣಿತ ಮತ್ತು ಭೌತ ವಿಜ್ಞಾನಗಳಲ್ಲಿ ಸ್ಪಷ್ಟವಾಗಿ 'ಭಯಂಕರ ದುರ್ಬಲಿ' ಆಗಿದ್ದರೂ ಶೇಷಾ ಯುಷ್ಯವನ್ನು ಅನ್ಯಕಾರ್ಯದಲ್ಲಿ ವ್ಯರ್ಥಗೊಳಿಸದೆ ಇವುಗಳ ಸಂಶೋಧನೆ ಯಲ್ಲಿಯೇ ವಿನಿಯೋಗಿಸಬೇಕೆಂಬುದು ಆತನ ಹಂಬಲ. ಆ ಪತ್ರದ ಲಕ್ಕೋಟೆಗೆ ಅಂಚೆಟಿಕೇಟುಗಳನ್ನು ಕೂಡ ಹಚ್ಚಲಾಗದಷ್ಟು ಕಡುಬಡವ ಆತ. ವಿಜ್ಞಾನ ಮತ್ತು ಗಣಿತ ವಿಷಯಗಳಲ್ಲಿ ಆತನ ಆಸಕ್ತಿ ಅತ್ಯಂತ ಗಾಢ ವಾದುದಾಗಿದ್ದರೂ ಎಳೆ ದಿನಗಳಂದು ಎದುರಿಸಬೇಕಾಗಿಬಂದಿದ್ದ ಕಠೋರ ಕಾರ್ಪಣ್ಯದಿಂದಾಗಿ ಅವುಗಳಲ್ಲಿ ಭದ್ರ ಅಡಿಪಾಯ ಕಟ್ಟಿಕೊಳ್ಳುವುದು ಕೈಗೂಡಿರಲಿಲ್ಲ. ಸಾಂಸಾರಿಕ ತಾಪತ್ರಯಗಳ ದೆಸೆಯಿಂದ ಅನ್ನಸಂಪಾದನೆ ಗೋಸ್ಕರ ಆತ ಸ್ವಂತ ಆಂತರಿಕ ಸ್ವಭಾವಕ್ಕೆ ತೀರ ವಿರುದ್ಧವಾಗಿ ಹುದ್ದೆ ಹಿಡಿಯುವುದು ಅನಿವಾರ್ಯವಾಯಿತು. ಒಂದು ವರ್ಷಕ್ಕಿಂತಲೂ ಹಿಂದೆ, ಅದೃಷ್ಟವಶಾತ್, ಪುಟ್ಟದೊಂದು ಜಗಳದ ಕಾರಣವಾಗಿ ಆತನನ್ನು ಕೆಲಸ ದಿಂದ ವಜಾಮಾಡಲಾಗಿತ್ತು. ಹೀಗಾಗಿ ಈಗ ಸ್ವಂತಾಸಕ್ತಿಯ ಹಾದಿಯ

ಮೇಲೆ ಮುನ್ನಡೆಯಲು ಆತ ಸ್ವತಂತ್ರನಾಗಿದ್ದ. ಆದರೆ ದುರ್ದೈವ—ಒಡಲು ಮತ್ತು ಅಸು ಬೇರ್ಪಡದಂತೆ ಕಾಪಾಡಿಕೊಳ್ಳಲು ತಕ್ಕ ಸಂಪಾದನೆ ಆತನಿಗಿರಲಿಲ್ಲ. ನೆರವು ಒದಗಲಿ ಒದಗದಿರಲಿ ತಾನಂತೂ ಸಾವು ಬರುವ ತನಕವೂ ದುಡಿಯುವುದು ಖಂಡಿತ. ಇದು ಆತನ ಅಚಲ ನಿರ್ಧಾರ. ಆರ್ಥಿಕ ಸಹಾಯ ಕೂಡಿಬಂದರೆ ಜೀವನ ಸುಗಮವಾದೀತು. ಈ ದಿಶೆಯಲ್ಲಿ ಐನ್‌ಸ್ಟೈನ್ ತನಗೆ ನೆರವು ನೀಡಿಯಾರೆಂದು ಆತ ಆಶಿಸಿದ್ದ.

೧೯೫೩ ಜುಲೈ ೨೮ರಂದು ಐನ್‌ಸ್ಟೈನ್ ಸಾಕಷ್ಟು ಉದ್ದವಾದ ಮಾರೋಲೆ ಬರೆದರು. ಭಾಷೆ ಇಂಗ್ಲಿಷ್. ಕೇವಲ ಸೌಜನ್ಯಪ್ರದರ್ಶನಕ್ಕಿಂತಲೂ ಹೆಚ್ಚಿನ ಒಂದು ನಿಲುವು ಇದರಲ್ಲಿ ಕಾಣಬರುವುದರಿಂದ ಇದು ಕುತೂಹಲಕಾರಿ ಆಗಿದೆ :

● ನಿಮ್ಮ ಪತ್ರ ಬಂದಿದೆ. ಭೌತವಿಜ್ಞಾನವನ್ನು ಅಭ್ಯಸಿಸುವುದರ ಬಗೆಗೆ ನಿಮಗೆ ಇರುವ ಗಾಢ ಅಭಿಲಾಷೆಯಿಂದ ನಾನು ಪ್ರಭಾವಿತನಾಗಿದ್ದೇನೆ. ಆದರೆ ನಿಮ್ಮ ನಿಲವನ್ನು ಮಾತ್ರ ಯಾವ ತೆರದಲ್ಲೂ ಒಪ್ಪಲಾರೆ ಎಂಬುದಾಗಿ ಹೇಳಲೇಬೇಕಾಗಿದೆ. ನಮ್ಮೆಲ್ಲರಿಗೂ ನೆಲೆ ಒದಗಿಸಿ ಪೋಷಿಸುತ್ತಿರುವುದು ನಮ್ಮ ಬಾಂಧವರ ದುಡಿಮೆ. ಇದನ್ನು ನಾವು ಆತ್ಮತೃಪ್ತಿಗೋಸ್ಕರವಾಗಿ ಆಯ್ದ ವೃತ್ತಿ ಒಂದರಿಂದಲೇ ಅಲ್ಲ, ಪ್ರಚಲಿತ ಅಭಿಮತದ ಪ್ರಕಾರ ಅವರಿಗೆ ಉಪಯೋಗವಾಗಬಲ್ಲ ದುಡಿಮೆಯಿಂದ ಕೂಡ ಪ್ರಾಮಾಣಿಕವಾಗಿ ಮರುಸಲ್ಲಿಸಲೇಬೇಕು. ಇಲ್ಲವಾದರೆ ನಮ್ಮ ಅಗತ್ಯಗಳು ಎಷ್ಟೇ ಸರಳ ಮತ್ತು ಸೀಮಿತವಾದವಾದರೂ ನಾವು ಬಂದಿಳಿಕೆಗಳಾಗುವುದು ದಿಟ. ಆರ್ಥಿಕ ಸುಧಾರಣೆಗಾಗಿ ನಿಮ್ಮ ದೇಶದಲ್ಲಿ ನಡೆಯುತ್ತಿರುವ ಹೋರಾಟದ ಈ ದಿನಗಳಂದು ಸುಶಿಕ್ಷಿತ ವ್ಯಕ್ತಿಗಳ ಸೇವೆ ಅತ್ಯಧಿಕವಾಗಿ ಬೇಕಾಗಿರುವುದರಿಂದ ಇದು ಇನ್ನಷ್ಟು ನಿಜವಾದ ಮಾತಾಗಿದೆ.

ಇದು ವಸ್ತುಸ್ಥಿತಿಯ ಒಂದು ಮುಖ. ಈಗ, ನೀವು ಏನು ಮಾಡಬೇಕೆಂಬುದನ್ನು ಮುಕ್ತವಾಗಿ ಆಯಬಲ್ಲಷ್ಟು ಸೌಕರ್ಯಗಳು ನಿಮಗಿರುವುದಾದ ಪಕ್ಷದಲ್ಲಿ ಆಗ ವಸ್ತುಸ್ಥಿತಿಯ ಇನ್ನೊಂದು ಮುಖವನ್ನು ಕೂಡ ಪರಿಗಣಿಸಬೇಕಾದೀತು. ವೈಜ್ಞಾನಿಕ ಕಾರ್ಯವನ್ನು ಎಸಗಲು ಪ್ರಯತ್ನಿಸುವಲ್ಲಿ—ಅತ್ಯಂತ ಪ್ರತಿಭಾವಂತ ವ್ಯಕ್ತಿಗಳಿಗೆ ಕೂಡ—ನಿಜ ಮೌಲ್ಯವಿರುವ ಫಲಿತಾಂಶವನ್ನು ಸಾಧಿಸಬಹುದಾದ ಯೋಗ ತೀರ ಕಡಿಮೆ. ಹೀಗಾಗಿ ನಿಮ್ಮ ಜೀವನದಲ್ಲಿ ಕಾರ್ಯನಿರ್ವಹಣೆಯ ಗರಿಷ್ಠ ಸಾಮರ್ಥ್ಯದ

ಅವಧಿ ಮುಗಿದುಹೋದಾಗ ನಿಮಗೆ ಹತಾಶೆ ಎದುರಾಗುವ ಸಂಭಾವ್ಯತೆಯೇ ಅತ್ಯಧಿಕ.

ಯೋಗ್ಯಮಾರ್ಗ ಒಂದೇ: ನಿಮ್ಮ ಹೆಚ್ಚಿನ ವೇಳೆಯನ್ನು ಯಾವುದೇ ಪ್ರಾಯೋಗಿಕ ಕಾರ್ಯಕ್ಕೆ—ಉಪಾಧ್ಯಾಯರಾಗಿ ಅಥವಾ ನಿಮ್ಮ ಸ್ವಭಾವಕ್ಕೆ ಒಗ್ಗುವ ಇನ್ನೊಂದು ಕ್ಷೇತ್ರದಲ್ಲಿ ದುಡಿಮೆಗಾರರಾಗಿ—ಮೀಸಲಿಟ್ಟು ಉಳಿಕೆ ಕಾಲವನ್ನು ಅಧ್ಯಯನದಲ್ಲಿ ವಿನಿಯೋಗಿಸಿ. ಆಗ ನೀವು ಲಕ್ಷ್ಮಿಯ ಕೃಪಾಕಟಾಕ್ಷಕ್ಕೆ ಪಾತ್ರರಾಗದೆಯೂ, ಯಾವುದೇ ಸಂದರ್ಭದಲ್ಲಾದರೂ, ಹಸನಾದ ಮತ್ತು ಸುಸಂಗತವಾದ ಬದುಕನ್ನು ಬಾಳಬಲ್ಲಿರಿ. ●

ಉತ್ಪಾದಿಸಲೇಬೇಕೆಂಬುದಾಗಿ ಹೇರಲಾಗುತ್ತಿದ್ದ ಬೌದ್ಧಿಕ ಸಂಮರ್ದದ ಬಗೆಗೆ ಐನ್‌ಸ್ಟೈನರಿಗಿದ್ದ ತಿರಸ್ಕಾರ, ಹುದ್ದೆಬಡ್ತಿಗಾಗಿ ನಡೆಯುತ್ತಿದ್ದ ಕೋಳಿಕಟ್ಟಕ್ಕೂ ಅನ್ವಯವಾಗುತ್ತಿತ್ತು. ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಪ್ಲ್ಯಾಂಕ್ ಅವರು ಅಲಂಕರಿಸಿದ್ದ ಪ್ರಾಧ್ಯಾಪಕಪೀಠಕ್ಕೆ ಯಾರು ಉತ್ತರಾಧಿಕಾರಿಗಳಾಗುತ್ತಾರೆ ಎಂಬುದನ್ನು ಕುರಿತು ವೈಜ್ಞಾನಿಕ ಪ್ರಪಂಚದಲ್ಲಿ ತೀವ್ರ ಜಿಜ್ಞಾಸೆ ನಡೆಯುತ್ತಿದ್ದಾಗ, ೧೯೨೭ ಮೇ ೫ರಂದು, ಐನ್‌ಸ್ಟೈನ್ ಹಾಲೆಂಡಿನಲ್ಲಿದ್ದ ಅವರ ಮಿತ್ರ ಪಾಲ್ ಏರೆನ್‌ಫೆಸ್ಟ್ ಅವರಿಗೆ ಈ ಮುಂದಿನಂತೆ ಬರೆದರು:

● ಭಗವತ್ಕೃಪೆ! ಸದ್ಯ ನಾನಿದರಲ್ಲಿ ಪಾತ್ರಿ ಆಗಿಲ್ಲವಲ್ಲ! ಮಹಾಮಿದುಳುಗಳ ಈ ಪಂದ್ಯದಲ್ಲಿ ಭಾಗವಹಿಸುವುದು ಇನ್ನೆಂದೂ ಅಗತ್ಯವಾಗಿಲ್ಲವಲ್ಲ! ಈ ತೆರನಾಗಿ ಪೈಪೋಟಿ ನಡೆಸುವುದು ಹಣಕ್ಕಾಗಿ ಇಲ್ಲವೇ ಅಧಿಕಾರಕ್ಕಾಗಿ ಹಾತೊರೆವ ದುರಾಸೆಗಿಂತ ಒಂದಿಷ್ಟೂ ಕಡಿಮೆ ಅಲ್ಲದ ಹೀನ ಸ್ವರೂಪದ ದಾಸ್ಯವೆಂಬುದಾಗಿ ನನಗೆ ಯಾವಾಗಲೂ ಅನ್ನಿಸಿದೆ. ●

ಐನ್‌ಸ್ಟೈನರ ಹಸ್ತಾಕ್ಷರದಲ್ಲಿದ್ದ ಒಂದು ಟಿಪ್ಪಣಿ ಜೆರೂಸಲೆಮ್ಮಿನ ಸೆಂಟ್ರಲ್ ಝಿಯನಿಸ್ಟ್ ಆರ್ಕೈವ್ಸಿನಲ್ಲಿ ಸಿಕ್ಕಿದೆ. ಇದನ್ನು ಅವರು ೧೯೩೩ ಅಕ್ಟೋಬರ್ ೩ರಂದು ಬರೆದಿದ್ದರು. ನಾಟ್ಸೀ ಜರ್ಮನಿಯಿಂದ ಓಡಿಬಂದಿದ್ದ ನಿರಾಶ್ರಿತ ವಿದ್ವಜ್ಜನರಿಗೆ ನೆರವು ಒದಗಿಸಲು ಸಾರ್ವಜನಿಕ ಸಭೆಯೊಂದರಲ್ಲಿ ಇವರೂ ಇತರ ಪ್ರತಿಷ್ಠಿತ ವ್ಯಕ್ತಿಗಳೂ ಅದೇ ದಿನ ಲಂಡನ್ನಿನ ಆಲ್ಬರ್ಟ್ ಹಾಲಿನಲ್ಲಿ ಭಾಷಣ ಮಾಡಿದ್ದರು. ಮುಂದಿನ ಕೆಲವೇ ದಿನಗಳಲ್ಲಿ ಐನ್‌ಸ್ಟೈನ್

ಇಂಗ್ಲೆಂಡಿನಿಂದ ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ ನಿರ್ಗಮಿಸಿದರು. ಇವರು ಮುಂದೆಂದೂ ಯೂರೋಪಿಗೆ ಮರಳಲಿಲ್ಲ. ಐನ್‌ಸ್ಟೈನ್ ಈ ಸಂದೇಶವನ್ನು ಯಾರಿಗೆ ಉದ್ದೇಶಿಸಿದ್ದರೆಂಬುದು ತಿಳಿದಿಲ್ಲ. ಯೆಹೂದ್ಯ ವಿದ್ವಜ್ಜನರನ್ನು ನಾಟ್ಸಿಗಳು ಸಾಮೂಹಿಕವಾಗಿ ವಜಾ ಮಾಡಿದುದರ ಬಗೆಗೆ ಇವರ ಚಿಂತನೆಗಳನ್ನು ಇದರಲ್ಲಿ ಕಾಣಬಹುದು :

● ಜೂಡಾಯಿಸಮ್ಮಿನ[16] ಮೌಲ್ಯ ಪೂರ್ತಿಯಾಗಿ ಸಾಂದ್ರೀಕೃತವಾಗಿರುವುದು ಅದರ ಆಧ್ಯಾತ್ಮಿಕ ಹಾಗೂ ನೈತಿಕ ಹೂರಣದಲ್ಲಿ, ಮತ್ತು ಬಿಡಿ ಯೆಹೂದ್ಯರು ಪ್ರದರ್ಶಿಸುವ ತದನುಗುಣವಾದ ನಡವಳಿಕೆಗಳಲ್ಲಿ. ಈ ಕಾರಣದಿಂದಲೇ ನಮ್ಮ ಪೈಕಿ ಸಮರ್ಥ ಮಂದಿಗೆ ಪ್ರಾಚೀನ ಕಾಲದಿಂದ ಇಂದಿನ ತನಕ ಅಧ್ಯಯನವೆಂಬುದೊಂದು ಪವಿತ್ರೋದ್ಯಮವಾಗಿ ನಡೆದುಕೊಂಡು ಬಂದಿರುವುದಾಗಿದೆ. ಇದು ಸರಿಯಾದ ಕ್ರಮ. ಅಂದಮಾತ್ರಕ್ಕೆ ನಮ್ಮ ಅನ್ನವನ್ನು ಬೌದ್ಧಿಕ ಕಾರ್ಯದಿಂದ ಸಂಪಾದಿಸಬೇಕೆಂಬುದು ಇದರ ಅರ್ಥವಲ್ಲ. ದುರ್ದೈವವೆಂದರೆ ನಮ್ಮಲ್ಲಿ ಬಹುಮಂದಿ ಮಾಡುತ್ತಿರುವುದೇ ಇದನ್ನು. ಇಂದಿನ ದಾರುಣ ಪರಿಸ್ಥಿತಿಗಳಲ್ಲಿ ಆಧ್ಯಾತ್ಮಿಕತೆ ಹಾಗೂ ಬೌದ್ಧಿಕತೆ, ಮತ್ತು ಅಧ್ಯಯನಶೀಲತೆ ಇವುಗಳ ಬಗೆಗೆ ನಮಗಿರುವ ಒಲವನ್ನು ಬಿಟ್ಟುಕೊಡದೆ ಪ್ರಾಯೋಗಿಕಾವಶ್ಯಕತೆಗೆ ತಕ್ಕಂತೆ ಹೊಂದಿಕೊಳ್ಳಲು ಶಕ್ತಿಮೀರಿ ಪ್ರಯತ್ನಿಸಬೇಕು. ●

*New York Herald Tribune* ಎಂಬ ಪತ್ರಿಕೆಯಲ್ಲಿ ಐನ್‌ಸ್ಟೈನ್ ನೀಡಿದ ಹೇಳಿಕೆ ಎಂಬುದಾಗಿ ಪ್ರಕಟವಾಗಿದ್ದ ಈ ಮುಂದಿನ ವರದಿಯನ್ನು ಒಬ್ಬ ಪತ್ರಕರ್ತ ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ೧೯೪೫ ಮಾರ್ಚ್ ೩೦ರಂದು ಬರೆದ ಪತ್ರದಲ್ಲಿ ಉಲ್ಲೇಖಿಸಿದ್ದ : "ಜರ್ಮನ್ ಯೆಹೂದ್ಯರೆಂಬವರಿಲ್ಲ; ರಶ್ಯನ್ ಯೆಹೂದ್ಯರೆಂಬವರಿಲ್ಲ; ಅಮೆರಿಕನ್ ಯೆಹೂದ್ಯರೆಂಬವರಿಲ್ಲ; ಯೆಹೂದ್ಯರೆಂಬವರು ಮಾತ್ರ ಇದ್ದಾರೆ, ಅಷ್ಟೆ." ಐನ್‌ಸ್ಟೈನರ ಹೇಳಿಕೆ ಸರಿಯಾಗಿ ಉದ್ಧೃತವಾಗಿರಲಾರದೆಂಬುದಾಗಿ ಆ ಪತ್ರಕರ್ತ ಅಭಿಪ್ರಾಯಪಟ್ಟಿದ್ದ. ಇದನ್ನು ಸಮರ್ಥಿಸಲು ಆತ ಉದಾಹರಣೆ ನೀಡಿದ : ಜರ್ಮನ್, ರಶ್ಯನ್ ಮತ್ತು ಅಮೆರಿಕನ್ ಸೈನ್ಯಗಳು ಹೂಡಿದ ಕದನಗಳಲ್ಲಿ 'ಯೆಹೂದ್ಯ ಪಂಥಾನುಯಾಯಿ ಮಂದಿ' ಕಾದಾಡಿದ್ದರು ಮತ್ತು ಆಯಾ ರಾಷ್ಟ್ರಗಳ ನಿಲುವೆಗಳನ್ನು ನಿಷ್ಠಾಪೂರ್ವಕವಾಗಿ ಬೆಂಬಲಿಸಿದ್ದರು.

೧೯೩೫ ಏಪ್ರಿಲ್ ೩ರಂದು ಐನ್‌ಸ್ಟೈನ್ ಈ ಮುಂದಿನಂತೆ ಮಾರ್ೋಲೆ ಬರೆದರು :

● ಅಂತಿಮ ವಿಶ್ಲೇಷಣೆಯಲ್ಲಿ ಪ್ರತಿಯೊಬ್ಬನೂ—ಆತ ಅಮೆರಿಕನ್ ಆಗಿರಲಿ, ಜರ್ಮನ್ ಆಗಿರಲಿ, ಯೆಹೂದ್ಯ ಆಗಿರಲಿ ಅಥವಾ ಜೆಂಟೈಲ್[42] ಆಗಿರಲಿ—ಒಬ್ಬ ಮಾನವ ವ್ಯಕ್ತಿ : ಈ ದೃಷ್ಟಿಕೋನದ ರೀತ್ಯ ವರ್ತಿಸುವುದು ಸಾಧ್ಯವಾದರೆ—ಇದೊಂದೇ ಗೌರವಾನ್ವಿತ ದೃಷ್ಟಿಕೋನ—ನಾನು ಬಲು ಸಂತೋಷಪಟ್ಟೇನು. ಪೌರತ್ವ ಮತ್ತು ಸಾಂಸ್ಕೃತಿಕ ಪರಂಪರೆಗಳ ಅನುಸಾರ ವೈವಳೆದಿರುವ ವಿಭಾಗಗಳು ಇಂದಿನ ವ್ಯಾವಹಾರಿಕ ಜೀವನದಲ್ಲಿ ಅಷ್ಟೊಂದು ಮಹತ್ತ್ವದ ಪಾತ್ರವಹಿಸುತ್ತಿವೆಯಲ್ಲ ಎಂಬುದು ನನ್ನಲ್ಲಿ ಅತೀವ ವೇದನೆ ಉಂಟುಮಾಡುತ್ತದೆ. ಆದರೆ ಇದನ್ನು ಬದಲಾಯಿಸಲು ಸಾಧ್ಯವಾಗುವುದಿಲ್ಲವಾಗಿ ವಾಸ್ತವಿಕತೆಯ ಬಗ್ಗೆ ಒಬ್ಬ ಕುರುಡಾಗಬಾರದು.

ಈಗ ಯೆಹೂದ್ಯರ ಮತ್ತು ಅವರ ಪ್ರಾಚೀನ ಸಾಂಪ್ರದಾಯಿಕ ಸಮುದಾಯದ ಬಗ್ಗೆ ನಾನು ಹೇಳುವುದಿಷ್ಟು : ಯೆಹೂದ್ಯರ ಕಷ್ಟ ಪರಂಪರೆಯ ದಾಖಲೆಗಳನ್ನು ಇತಿಹಾಸಕಾರನ ಕಣ್ಣುಗಳ ಮೂಲಕ ನೋಡಿದುದಾದರೆ ಅವರು ಯಾವುದೇ ರಾಜಕೀಯಸಮುದಾಯಕ್ಕೆ ಸೇರಿದವರೆಂಬುದಕ್ಕಿಂತಲೂ ಯೆಹೂದ್ಯರೆಂಬ ಸಂಗತಿಯೇ ಅಧಿಕ ಪ್ರಭಾವಶಾಲಿಯಾದದ್ದು ಎಂಬುದು ವೇದ್ಯವಾಗುತ್ತದೆ. ಉದಾಹರಣೆಗೆ ಜರ್ಮನ್ ಯೆಹೂದ್ಯರನ್ನು ಜರ್ಮನಿಯಿಂದ ಹೊರಕ್ಕೆ ಅಟ್ಟಿದುದಾದರೆ ಆಗ ಅವರು ಜರ್ಮನ್ನರಾಗಿ ಉಳಿಯುವುದಿಲ್ಲ ; ಅವರು ತಮ್ಮ ಭಾಷೆಯನ್ನೂ ರಾಜಕೀಯ ಸಂಯೋಜನೆಯನ್ನೂ ಬದಲಾಯಿಸಿಯಾರು ; ಆದರೆ ಯೆಹೂದ್ಯರಾಗಿಯೇ ಉಳಿದಿರುತ್ತಾರೆ. ಇದು ಹೀಗೇಕೆ ಎಂಬುದು ತೊಡಕಿನ ಸಮಸ್ಯೆ. ಆಳವಾಗಿ ಬೇರುಬಿಟ್ಟಿರುವ ಮತ್ತು ಖಂಡಿತವಾಗಿಯೂ ಮತಧರ್ಮದ ವಲಯಕ್ಕೆ ಸೀಮಿತವಲ್ಲದ ಪರಂಪರೆಗಳಲ್ಲಿ ಇದರ ಕಾರಣವನ್ನು ನಾನು ಕಾಣುವಷ್ಟರಮಟ್ಟಿಗೆ ಜನಾಂಗೀಯ ವೈಲಕ್ಷಣ್ಯಗಳಲ್ಲಿ ಕಾಣಲಾರೆ. ನಿರ್ದಿಷ್ಟ ರಾಷ್ಟ್ರಗಳ ಪ್ರಜೆಗಳಾಗಿ ಯೆಹೂದ್ಯರು ಆ ರಾಷ್ಟ್ರಗಳು ಹೂಡುವ ಕಾಳಗಗಳಲ್ಲಿ ಅಸು ನೀಗುವರೆಂಬ ಸಂಗತಿಯಿಂದ ಈ ವಸ್ತುಸ್ಥಿತಿ ಬದಲಾಗುವುದಿಲ್ಲ. ●

ಮೇಲಿನ ಪತ್ರದಲ್ಲಿ ಝಿಯನಿಸಮ್ಮನ್ನು[43] ಕುರಿತ ನಿರ್ದಿಷ್ಟ ಉಲ್ಲೇಖ ಕಾಣು ತ್ತಿಲ್ಲ. ಹಾಗಿದ್ದರೂ ಐನ್‌ಸ್ಟೈನರ ಮನಸ್ಸನ್ನು ಝಿಯನಿಸಮ್ ಆ ವೇಳೆಗೆ ಆಕ್ರಮಿಸಿಬಿಟ್ಟಿತ್ತು. ಝಿಯನಿಸ್ಟ್ ಕಾರ್ಯಕರ್ತರಾಗಿದ್ದ ಕುರ್ಟ್ ಬ್ಲೂಮೆನ್‌ಫೆಲ್ಡ್ ಎಂಬವರು ೧೯೧೯ರ ತರುಣದಲ್ಲಿ—ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತದ ಫಲಿತಾಂಶವನ್ನು ಪೂರ್ಣ ಸೂರ್ಯಗ್ರಹಣ ಸ್ಥಿರೀಕರಿಸುವ, ಮತ್ತು ಆ ಕಾರಣದಿಂದ ಐನ್‌ಸ್ಟೈನರಿಗೆ ಪ್ರಪಂಚಖ್ಯಾತಿ ಪ್ರಾಪ್ತವಾಗುವ ಮೊದಲು[44]—ಝಿಯನಿಸಮ್ಮನ್ನು ಕುರಿತು ಐನ್‌ಸ್ಟೈನ ರೊಡನೆ ಪ್ರಸ್ತಾವಿಸಿದ್ದರು. ಜೆರೂಸಲೆಮ್ಮಿನಲ್ಲಿ ವಿಶ್ವವಿದ್ಯಾಲಯವನ್ನು ಸಂಸ್ಥಾಪಿಸಲು ನಿಧಿಸಂಗ್ರಹಣಾರ್ಥ ಅಮೆರಿಕ ಸಂಯುಕ್ತಸಂಸ್ಥಾನಗಳಿಗೆ ಪಯಣಿಸಲು ಛೈಮ್ ವೈಟ್ಸ್‌ಮನ್ನರಿಂದ[45] ಬಂದಿದ್ದ ಆಹ್ವಾನವನ್ನು ಅಂಗೀಕರಿಸುವಂತೆ ಬ್ಲೂಮೆನ್‌ಫೆಲ್ಡ್ ಐನ್‌ಸ್ಟೈನರನ್ನು ಪುಸಲಾಯಿಸಿ ಒಪ್ಪಿಸಿದ್ದರು. ಇದು ನಡೆದದ್ದು ಎರಡು ವರ್ಷಗಳ ತರುವಾಯ. ಝಿಯನಿಸ್ಟ್ ಚಳವಳಿಯ ಪ್ರಪಂಚಧುರೀಣ ವೈಟ್ಸ್‌ಮನ್—ಮುಂದಿನ ದಿನಗಳಲ್ಲಿ ಇವರು ಇಸ್ರೇಲ್ ರಾಷ್ಟ್ರದ ಪ್ರಥಮಾಧ್ಯಕ್ಷರಾಗಲಿದ್ದರು—ಸ್ವತಃ ಒಬ್ಬ ವಿಜ್ಞಾನಿಯೂ ಹೌದು. ತಮ್ಮ ಅಟ್ಲಾಂಟಿಕ್‌ಯಾನದ ಬಗ್ಗೆ ವಿವರಿಸುತ್ತ ಇವರು ಹೇಳಿದರು "ಐನ್‌ಸ್ಟೈನ್ ನನಗೆ ಪ್ರತಿದಿನವೂ ತಮ್ಮ ಸಿದ್ಧಾಂತವನ್ನು ವಿವರಿಸಿದರು. ಅವರಿಗೆ ಅದು ಪೂರ್ತಿ ಅರ್ಥವಾಗಿತ್ತೆಂಬುದು ದಡ ಸೇರುವಷ್ಟರಲ್ಲಿ ನನಗೆ ಮನವರಿಕೆ ಆಗಿತ್ತು."

ಸ್ನೇಹಿತ ಹೈನ್ರಿಕ್ ಝಾಂಗರ್ ಅವರಿಗೆ ಐನ್‌ಸ್ಟೈನ್ ೧೯೨೧ ಮಾರ್ಚ್ ೧೮ರಂದು ಬರೆದ ಕಾಗದವನ್ನು ಭಾಗಶಃ ಇಲ್ಲಿ ಉದ್ಧರಿಸಿದೆ:

● ಶನಿವಾರ ನಾನು ಅಮೆರಿಕಕ್ಕೆ ತೆರಳಲಿದ್ದೇನೆ—ವಿಶ್ವವಿದ್ಯಾಲಯ ಗಳಲ್ಲಿ ಉಪನ್ಯಾಸಮೀಯಲೆಂದಲ್ಲ (ಪ್ರಾಯಶಃ ಇದನ್ನು ನಾನು ಪಕ್ಕ ವಾದ್ಯವಾಗಿ ನುಡಿಸಬೇಕಾದೀತು), ಬದಲು, ಜೆರೂಸಲೆಮ್ಮಿನಲ್ಲಿ ಯೆಹೂದ್ಯ ವಿಶ್ವವಿದ್ಯಾಲಯದ ಸಂಸ್ಥಾಪನೆಗೆ ನೆರವಾಗಲೆಂದು. ಈ ಉದ್ದೇಶದ ಈಡೇರಿಕೆ ಗಾಗಿ ಏನನ್ನಾದರೂ ಮಾಡಬೇಕೆಂಬುದು ನನ್ನ ಕಡುಹಂಬಲ. ●

ತಮ್ಮ ಭೌತವಿಜ್ಞಾನಿ-ಸ್ನೇಹಿತ ಪಾಲ್ ಏರೆನ್‌ಫೆಸ್ಟ್ ಅವರಿಗೆ ೧೯೨೧ ಜೂನ್ ೧೮ರಂದು ಬರೆದ ಕಾಗದದ ಒಂದು ಅಂಶ ಇಲ್ಲಿದೆ:

● ಯೆಹೂದ್ಯ ಜನರಿಗೆ ಬದುಕುವುದರಲ್ಲಿ ಆನಂದವನ್ನು ಮತ್ತೆ ಗಳಿಸಿ ಕೊಡಬಲ್ಲ ವಿನೂತನ ಯೆಹೂದ್ಯಾದರ್ಶವೇ ಝಿಯನಿಸಮ್.... ನಾನು

ವೈಟ್ಸ್‌ಮನ್ ಅವರ ಆಹ್ವಾನವನ್ನು ಅಂಗೀಕರಿಸಿದ್ದು ನನಗೆ ತುಂಬ ಸಂತೋಷಕೊಟ್ಟಿದೆ. ●

ಯೆಹೂದ್ಯಮಂದಿಗೆ ಐನ್‌ಸ್ಟೈನ್ ಅಗಾಧ ಪ್ರತೀಕಾತ್ಮಕ ಪ್ರಾಮುಖ್ಯವುಳ್ಳ ವ್ಯಕ್ತಿ ಆಗಿದ್ದರು. ಭವಿಷ್ಯದಲ್ಲಿ ಹೀಬ್ರೂ ವಿಶ್ವವಿದ್ಯಾಲಯದ ನೆಲೆ ಆಗಲಿದ್ದ ಮೌಂಟ್ ಸ್ಕೋಪಸ್ ಪ್ರದೇಶವನ್ನು ೧೯೨೩ರಲ್ಲಿ ಇವರು ಸಂದರ್ಶಿಸಿದಾಗ ಇವರನ್ನು "ನಿಮಗಾಗಿ ಎರಡು ಸಾವಿರ ವರ್ಷಗಳಿಂದ ಕಾಯುತ್ತಿರುವ ಈ ಪವಿತ್ರ ಪೀಠದಿಂದ" ಪ್ರವಚನವೀಯಲು ಆಹ್ವಾನಿಸಲಾಯಿತು.

ಐನ್‌ಸ್ಟೈನ್ ೧೯೨೬ ಏಪ್ರಿಲ್ ೧೨ರಂದು ಪಾಲ್ ಏರೆನ್‌ಫೆಸ್ಟ್ ಅವರಿಗೆ ಬರೆದ ಕಾಗದದಲ್ಲಿ ಹೀಬ್ರೂ ವಿಶ್ವವಿದ್ಯಾಲಯದ ಬಗೆಗೆ ಪ್ರಸ್ತಾವಿಸಿದರು:

● ಕಾಲದೊಂದಿಗೆ ಈ ಸಾಹಸೋದ್ಯಮ ಅದ್ಭುತವಾಗಿ ವಿಕಸಿಸುವುದೆಂದು ದೃಢವಾಗಿ ನಂಬಿದ್ದೇನೆ; ಜೊತೆಗೆ ಯೆಹೂದ್ಯರ ಸಂತನಾಗಿರುವ ನನ್ನ ಹೃದಯ ಹಿಗ್ಗಿ ಹದಿನಾರಾಗಿದೆ. ●

ಝಯನಿಸಮ್ ವಿರೋಧಿ ಯೆಹೂದ್ಯನೊಬ್ಬನ ಕಾಗದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸುತ್ತ ಪ್ರಾಯಶಃ ಜನವರಿ ೧೯೪೬ರಲ್ಲಿ ಐನ್‌ಸ್ಟೈನ್ ಬರೆದರು:

● ಝಯನಿಸ್ಟ್ ಚಳವಳಿಯನ್ನು 'ರಾಷ್ಟ್ರವಾದಿ' ಎಂಬುದಾಗಿ ಹಳಿಯುವುದು ನನ್ನ ಅಭಿಮತದಲ್ಲಿ ಅಸಮರ್ಥನೀಯ. ಥಿಯೊಡೋರ್ ಹರ್ಝ್ಲ್[46] ಯಾವ ಹಾದಿ ಮೇಲೆ ಸಾಗಿ ತಮ್ಮ ನಿಯೋಗ ತಲಪಿದರೆಂಬುದನ್ನು ಪರಿಗಣಿಸಿ. ಆರಂಭದಲ್ಲಿ ಅವರು ಪೂರ್ತಿ ಪ್ರಪಂಚ ಪ್ರಜೆ ಆಗಿದ್ದರು. ಆದರೆ ಪ್ಯಾರಿಸ್ಸಿನಲ್ಲಿ ನಡೆದ ಡ್ರೈಫಸ್ ವಿಚಾರಣೆ[17] ವೇಳೆ ಅವರಿಗೆ ಪಾಶ್ಚಾತ್ಯ ಪ್ರಪಂಚದಲ್ಲಿ ಯೆಹೂದ್ಯರ ಸ್ಥಿತಿಗತಿ ಎಂಥ ಘೋರ ವಿಪತ್ತಿನಲ್ಲಿದೆಯೆಂಬ ಸಂಗತಿ ಸ್ಪಷ್ಟವಾಗಿ ಮತ್ತು ಹಠಾತ್ತಾಗಿ ಮನವರಿಕೆ ಆಯಿತು. ಧೈರ್ಯವಾಗಿ ಅವರೊಂದು ನಿರ್ಣಯಕ್ಕೆ ಬಂದರು: ನಮ್ಮ ವಿರುದ್ಧ ಪಕ್ಷಪಾತ ಧೋರಣೆ ಇರುವುದು ಅಥವಾ ನಮ್ಮನ್ನು ಕೊಲೆಮಾಡುವುದು ನಾವು 'ಯೆಹೂದ್ಯ ಪಂಥ'ದ ಜರ್ಮನ್ನರು, ಫ್ರೆಂಚರು, ಅಮೆರಿಕನ್ನರು ಇತ್ಯಾದಿ ಕಾರಣಕ್ಕಾಗಿ ಅಲ್ಲ, ಬದಲು ನಾವು ಯೆಹೂದ್ಯರು ಎಂಬ ಏಕೈಕ ಕಾರಣಕ್ಕಾಗಿ. ಹೀಗೆ

ಈಗಾಗಲೇ ಅಪಾಯದ ಅಂಚಿನಲ್ಲಿರುವ ನಮ್ಮ ಈ ಪರಿಸ್ಥಿತಿ, ನಮ್ಮ ದೌರ್ಬಲ್ಯವೇನೇ ಇದ್ದರೂ, ನಮ್ಮನ್ನು ಒಂದಾಗಿ ನಿಲ್ಲುವಂತೆ ಬಲವದ್ಬಂಧಿಸುತ್ತದೆ. ಸರ್ವನಾಶದ ಎದುರಾಗಿ ಜರ್ಮನ್ ಯೆಹೂದ್ಯರಿಗೆ ಝಿಯನಿಸಮ್ ಯಾವ ಹೆಚ್ಚಿನ ರಕ್ಷಣೆಯನ್ನೂ ಒದಗಿಸಲಿಲ್ಲ, ನಿಜ. ಆದರೆ ಅಳಿಯದೆ ಉಳಿದವರಿಗೆ ಇದು ತಮ್ಮ ಆರೋಗ್ಯಕರ ಆತ್ಮಪ್ರತ್ಯಯವನ್ನು ಕಳೆದುಕೊಳ್ಳದೆ ಗಂಭೀರವಾಗಿ ಈ ದೌಷ್ಟ್ಯವನ್ನು ಸಹಿಸಿಕೊಳ್ಳಲು ತಕ್ಕ ಪುನಃಸ್ಥೈರ್ಯ ನೀಡಿತು. ಪ್ರಾಯಶಃ ಇಂಥದೇ ಒಂದು ವಿಧಿ ನಿಮ್ಮ ಮಕ್ಕಳನ್ನು ಕಬಳಿಸಲು ಹೊಂಚುತ್ತಿರಬಹುದೆಂಬುದು ನೆನಪಿನಲ್ಲಿರಲಿ. ●

ಝಿಯನಿಸಮ್ಮಿಗೆ ಇವರನ್ನು ಪರಿಚಯಿಸಿದ ಮತ್ತು ಈ ಮೇಲೆ ಹೆಸರಿಸಿದ ಕುರ್ಟ್ ಬ್ಲೂಮೆನ್‌ಫೆಲ್ಡರಿಗೆ ಐನ್‌ಸ್ಟೈನ್ ೧೯೫೫ರ ಮಾರ್ಚಿಯಲ್ಲಿ—ತಮ್ಮ ಮರಣಕ್ಕೆ ಒಂದು ತಿಂಗಳಿಗಿಂತಲೂ ಕಡಿಮೆ ಅವಧಿ ಇದ್ದಾಗ—ಈ ಮಾತುಗಳನ್ನು ಬರೆದರು :

● ನನ್ನ ಯೆಹೂದ್ಯಜೀವನದ ಅರಿವು ನನ್ನಲ್ಲಿ ಬೆಳಗಲು ನೆರವಾದ ನಿಮ್ಮನ್ನು ಈ ಕೊನೆಗಳಿಗೆಯಲ್ಲಿ ಕೂಡ ಅಭಿವಂದಿಸುತ್ತೇನೆ. ●

ಸ್ಯಾಮ್ ಗ್ರೋನೆಮ್ಯಾನ್ ಎಂಬವರೊಬ್ಬ ಬಹುಮುಖಪ್ರತಿಭೆಯ ವ್ಯಕ್ತಿ : ಬರ್ಲಿನ್ನಿನ ವಕೀಲ, ಲೇಖಕ, ನಾಟಕಕರ್ತೃ ಮತ್ತು ಪ್ರಮುಖ ಝಿಯನಿಸ್ಟ್. ಇವರು ನಾಟ್ಸೀ ಜರ್ಮನಿಯನ್ನು ತೊರೆದು ಇಸ್ರೇಲಿನಲ್ಲಿ ನೆಲಸಿದ್ದರು. ೧೯೪೯ ಮಾರ್ಚ್ ೧೪ರಂದು ಐನ್‌ಸ್ಟೈನರ ಎಪ್ಪತ್ತನೆಯ ಹುಟ್ಟುಹಬ್ಬದ ಸವಿನೆನಪಿಗಾಗಿ ಇವರು ಇಸ್ರೇಲಿನ ಟೆಲ್ ಅವೀವಿನಿಂದ ಐನ್‌ಸ್ಟೈನರಿಗೆ ಕಗ್ಗ ಸಹಿತವಾದ ಒಂದು ಕಾಗದ ಕಳಿಸಿದರು. ಆ ನುಡಿಗಳ ಅನುವಾದವಿದು :

ಸಾಪೇಕ್ಷತೆಯನರಿಯಲೆನುತ ಬಲು ತಿಣುಕಿದವ<br>
ಹಗಲಿರುಳು, ವಿಫಲನಾಗುತ ಗುರಿಯ ನಿಲುಕದವ<br>
ನಿರ್ದೇಶಕಗಳಿಂದ ತೊಂದರೆಗೆ ಸಿಲುಕದವ<br>
ಲವಲೇಶ ಭೀತಿ ಗಾಬರಿ ಸೋಂಕು ತಟ್ಟದವ-<br>
ನೀತೆರದಿ ವಾದಿಸುವನಳುಕು ನಯವಿನಯದಿಂ :<br>
ಎಪ್ಪತ್ತು ತುಂಬಿರುವ ಐನ್‌ಸ್ಟೈನ್ ಸುಹಾಸದಿಂ-

ದಿಂದಿಗೂ ನಲಿಯುತಿರಲವರ ಹಿರಿ ಸಿದ್ಧಾಂತ
ಪ್ರಾಯೋಗಿಕೋಪಯುಕ್ತತೆ ಪಡೆದ ವೃತ್ತಾಂತ
ದಿಟ ಕಣಾ ಸಂತೋಷ ! ಎಪ್ಪತ್ತರೀ ಶುಭ ಸ-
ಮಾರಂಭ ನಡೆವಂದು ನಿಮಗೆ ಮೇಣ್ ನಮಗೂ ಸ-
ದಾಶಯವ ಸಲ್ಲಿಸಲು ಹೆಮ್ಮೆ ಪಡುತಿಹೆ ನಾನು,
ಇಸ್ರೇಲಿನಲ್ಲಿರ್ಪ ಜನರೆಲ್ಲ ನಿಮ್ಮನ್ನು
ಪ್ರೀತಿಗೌರವದಿಂದ ತಮ್ಮವರೆನುತ ನಂಬಿ
ನಿಮಗೆ ಶುಭ ಕಾಮನೆಯನರ್ಪಿಪರು ಎದೆ ತುಂಬಿ ! ●

ಐನ್‌ಸ್ಟೈನ್ ಒಡನೆ ಮಾರೋಲೆ ಬರೆದರು. ಅವರ ಅನುಕ್ರಿಯೆಯ ಅನುವಾದವಿದು :

● ಅರ್ಥ ತಿಳಿಯದ ಮಂದಿ ಹೊಡೆಯುವರುಮಿಗೆ ಲಾಗ
ನೀವಲ್ಲ ನಿಜಕೂ ! ಸುಹಾಸವೇ ನಿಮ್ಮ ಬದುಕಿನ ರಾಗ !
ನಾನೆಂಬೆ ನಿಮ್ಮ ಚಿಂತನೆ ಹರಿದ ಧಾಟಿಯಿದು :
ಭಗವಂತ ನಮ್ಮನ್ನು ರಚಿಸಿರುವ ಮೋಡಿಯಿದು !

ಭಗವಂತ ಹಗೆತನವ ಸಾಧಿಸನು—ಅನ್ಯಾಯ
ವಿದು, ನಮ್ಮ ದೌರ್ಬಲ್ಯ ಕಾರಣನೆ ಆತ ! ಭಯ
ದಿಂದ ರಕ್ಷಣೆಯಿರದೆ ಮಂದಿ ಸೋಲುವುದುಂಟು
ಜಂಜಾಟದಲಿ ಗೆಲುವು ಖಾತ್ರಿ ಕನಸಿನ ಗಂಟು

ಏನಿರ್ದೊಡೇಂ ? ಶಾಪಹಾಕದೆಯೆ ಕಗ್ಗಗಳ
ಹೊಸೆದು ತೃಪ್ತಿಯ ನೀವು ತಂದಿಹಿರಿ, ಅತಿ ಸರಳ
ಅತಿ ಚಮತ್ಕಾರ ! ಪುಣ್ಯಾತ್ಮ ಪಾಪಿಷ್ಠರೆ-
ಲ್ಲರ್ಗೆ ಗೆಲುಮೆಯ ಭಾವ ನೀಡಿಹಿರಿ, ಭಲೆ ಭಳಿರೆ ! ●

ಕೊಲೊರ್ಯಾಡೊವಿನ ಒಬ್ಬ ಬ್ಯಾಂಕರ್ ೧೯೨೭ ಆಗಸ್ಟ್ ೫ರಂದು, ಆಗ ಬರ್ಲಿನ್ನಿನಲ್ಲಿದ್ದ ಐನ್‌ಸ್ಟೈನರಿಗೆ ಬರೆದ ಒಂದು ಕಾಗದ ಐನ್‌ಸ್ಟೈನ್ ಪತ್ರಾಗಾರದಲ್ಲಿದೆ. 'ಕೆಲವು ತಿಂಗಳ ಹಿಂದೆ ನಾನು ನಿಮಗೆ ಹೀಗೆ ಬರೆದಿದ್ದೆ' ಎಂಬುದಾಗಿ ಅದು ಆರಂಭವಾಗುವುದರಿಂದ ಐನ್‌ಸ್ಟೈನ್ ಅದಕ್ಕೆ ಆ ವೇಳೆಗ ಉತ್ತರ ಬರೆದಿರಲಿಲ್ಲವೆಂದು ಭಾವಿಸಬಹುದು. ದೇವರೆಂಬವನು ದೇವತೆಗಳಿಂದ ಪರಿವೇಷ್ಟಿತನೂ ಶ್ಮಶ್ರುಭೂಷಿತ ಕೃಪಾಮಯಿಯೂ ಆದ ಪುರುಷ ಎಂಬ ಭಾವನೆಗಳನ್ನು ಹೆಚ್ಚಿನ ವಿಜ್ಞಾನಿಗಳು ಮತ್ತು ಅವರ ತೆರನಾಗಿ ಯೋಚಿಸ

ವವರು ತೊರೆದುಬಿಟ್ಟಿರುವವರಾದರೂ ಅನೇಕ ಮಂದಿ ನಿಷ್ಠಾವಂತರು ಅಂಥ ದೇವರನ್ನೇ ಮನ್ನಿಸಿ ಪೂಜಿಸುತ್ತಿರುವವರೆಂಬುದಾಗಿ ಆ ಬ್ಯಾಂಕರ್ ಬರೆದಿದ್ದ. ಸಾಹಿತ್ಯ ಸಮುದಾಯವೊಂದರಲ್ಲಿ ನಡೆದ ಚರ್ಚೆಯ ವೇಳೆ ದೇವರ ಬಗೆಗಿನ ಪ್ರಶ್ನೆ ಉದ್ಭವಿಸಿತ್ತು. ಆಗ ಸದಸ್ಯರ ಪೈಕಿ ಹಲವರು ಸುಪ್ರಸಿದ್ಧ ವ್ಯಕ್ತಿಗಳಿಗೆ ಅವರ ಅಭಿಪ್ರಾಯಗಳನ್ನು, ಪ್ರಕಟಿಸಲು ಅನುಕೂಲವಾಗುವ ರೂಪದಲ್ಲಿ, ಬರೆದು ಕಳಿಸುವಂತೆ ಪ್ರಾರ್ಥನೆ ಸಲ್ಲಿಸಬೇಕೆಂದು ನಿರ್ಧರಿಸಿದ್ದರು ಎಂಬುದಾಗಿ ತಿಳಿಸಿದ. ಇಪ್ಪತ್ತನಾಲ್ಕರಷ್ಟು ಮಂದಿ ನೊಬೆಲ್ ಪ್ರಶಸ್ತಿ ವಿಜೇತರು ಈಗಾಗಲೇ ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದರೆಂದು ಬರೆದು ಐನ್‌ಸ್ಟೈನ್ ಕೂಡ ಸಹಕರಿಸಬಹುದೆಂದು ಆಶಿಸಿದ್ದ. ಇವರು ಆ ಪತ್ರದ ಮೇಲೆ ಜರ್ಮನ್ ಭಾಷೆಯಲ್ಲಿ ಈ ಮುಂದಿನದನ್ನು ಬರೆದರು. ಇದನ್ನು ರವಾನಿಸಿರಬಹುದು, ರವಾನಿಸಿಲ್ಲದಿರಬಹುದು :

● ವ್ಯಕ್ತಿಗಳ ಕ್ರಿಯೆಗಳನ್ನು ಪ್ರತ್ಯಕ್ಷವಾಗಿ ಪ್ರಭಾವಿಸಬಲ್ಲ ಅಥವಾ ತನ್ನದೇ ಸೃಷ್ಟಿಯ ಜೀವಿಗಳ ಕರ್ಮದ ಮೇಲೆ ನಿರ್ಣಾಯಕಸ್ಥಾನದಲ್ಲಿ ಪ್ರತ್ಯಕ್ಷವಾಗಿ ಕುಳಿತಿರಬಲ್ಲ ವೈಯಕ್ತಿಕ ದೇವರನ್ನು ಕಲ್ಪಿಸಿಕೊಳ್ಳಲಾರೆ. ಆಧುನಿಕ ವಿಜ್ಞಾನದ ಪರಿಣಾಮವಾಗಿ ಯಂತ್ರವಿದ್ಯಾತ್ಮಕ ಕಾರಣತೆ[48] ಸ್ವಲ್ಪಮಟ್ಟಿಗೆ ಸಂದೇಹಕ್ಕೆ ಎಡೆ ಆಗಿರುವುದು ನಿಜವಾಗಿದ್ದರೂ ನಾನು ಮಾತ್ರ ನನ್ನ ನಿಲವನ್ನು ಬದಲಾಯಿಸಲಾರೆ.

ನನ್ನ ಧಾರ್ಮಿಕ ಶ್ರದ್ಧೆ ಎಂಬುದು ನಮ್ಮ ಕ್ಷೀಣ ಹಾಗೂ ಅಲ್ಪಕಾಲಿಕ ಗ್ರಹಣಸಾಮರ್ಥ್ಯ ಅತ್ಯಲ್ಪವಾಗಿ ಮಾತ್ರ ಗ್ರಹಿಸಬಲ್ಲ ವಾಸ್ತವತೆಯ ರೂಪದಲ್ಲಿ ಪ್ರಕಟಿತವಾಗುವ ಆ ಮಹೋನ್ನತ ಮತ್ತು ಅನಂತ ಸತ್ತ್ವವನ್ನು ಕುರಿತ ವಿನೀತಗೌರವವಾಗಿದೆ. ನೈತಿಕತೆ ಅತಿ ಮುಖ್ಯವಾದದ್ದು—ಆದರೆ ನಮಗೆ, ದೇವರಿಗಲ್ಲ. ●

ಕಾರ್ನೀಲಿಯಸ್ ಲ್ಯಾಂಕ್ಜೋಸ್[49] ಅವರಿಗೆ ಐನ್‌ಸ್ಟೈನ್ ೧೯೩೮ ಜನವರಿ ೨೪ರಂದು ಬರೆದ ಪತ್ರವೊಂದರ ಉದ್ಧೃತಾಂಶವಿಲ್ಲಿದೆ. ಈ ಮೇಲಿನ ವಿಷಯವನ್ನು ಕುರಿತಂತೆ ಇದು ತುಂಬ ಔಚಿತ್ಯಪೂರ್ಣವಾಗಿದೆಯೆಂದು ಗಮನಿಸಬಹುದು :

● ಹೆಚ್ಚುಕಡಿಮೆ ಮ್ಯಾಕ್[50] ಅವರಂತೆ ನಾನು ಕೂಡ ಅಜ್ಞೇಯಯುತಾನುಭವೈಕವಾದದಿಂದ[51] ತೊಡಗಿದೆ. ಆದರೆ ಗುರುತ್ವದ ಸಮಸ್ಯೆ ನನ್ನನ್ನು

ಒಬ್ಬ ಶ್ರದ್ಧಾವಂತ ಬುದ್ಧ್ಯೈಕ ಪ್ರಾಮಾಣ್ಯವಾದಿಯಾಗಿ[೨] ಮತಾಂತರಿಸಿತು—ಅಂದರೆ ಖುತದ ಏಕೈಕ ವಿಶ್ವಾಸಾರ್ಹ ಆಕರವನ್ನು ಗಣಿತೀಯ ಸರಳತೆಯಲ್ಲಿ ಅರಸುವ ಒಬ್ಬ ವ್ಯಕ್ತಿಯಾಗಿ. ●

ಐನ್‌ಸ್ಟೈನ್ ಇಲ್ಲಿ ಗುರುತ್ವವನ್ನು ಕುರಿತು ಪ್ರಸ್ತಾವಿಸುವಾಗ ೧೯೦೫ರಿಂದ ೧೯೧೫ರ ತನಕ ಹತ್ತುವರ್ಷಗಳ ಕಾಲ ಅವರು ಸ್ಫೂರ್ತಿವಂತರಾಗಿ ಹೂಡಿದ ಮಹಾಪ್ರಯತ್ನದ ಫಲವಾದ ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತವನ್ನು ಉಲ್ಲೇಖಿಸುತ್ತಿರುವುದಾಗಿದೆ. ಸೌಂದರ್ಯಾತ್ಮಕವಾಗಿ ಅವರಿಗೆ ಎದುರಾದ ಇರುಸು ಮುರುಸು ಭಾವವೇ ಇದರ ಮೂಲಕಾರಣ. ೧೯೦೫ರಲ್ಲಿ ಅವರು ಪ್ರಕಟಿಸಿದ ವಿಶೇಷ ಸಾಪೇಕ್ಷತಾಸಿದ್ಧಾಂತದ ಪ್ರಕಾರ ಏಕರೀತಿ ಚಲನೆ ಸಾಪೇಕ್ಷವೆಂದಿತ್ತು. ಚಲನೆಯು ಒಂದು ವಿಶೇಷ ಬಗೆ ಮಾತ್ರ ಸಾಪೇಕ್ಷವಾಗಿರುವುದು ಅಸುಂದರವೆಂಬುದಾಗಿ ಐನ್‌ಸ್ಟೈನ್ ಅಭಿಪ್ರಾಯಪಟ್ಟರು. ಏಕರೀತಿ ಚಲನೆ ಸಾಪೇಕ್ಷವಾಗಿರುವುದಾದಪಕ್ಷದಲ್ಲಿ ಎಲ್ಲ ಬಗೆಯ ಚಲನೆ ಕೂಡ ಹಾಗೆಯೇ ಇರತಕ್ಕದ್ದು. ಆದರೆ ಏಕರೀತಿಯದಲ್ಲದ ಚಲನೆ ನಿರಪೇಕ್ಷವೆಂಬುದು ಸಾಮಾನ್ಯ ದೈನಂದಿನಾನುಭವವಾಗಿತ್ತು. ಇಂಥ ಪ್ರಬಲ ಪುರಾವೆಗೆ ಎದುರಾಗಿ ಕಡಿಮೆದರ್ಜೆಯ ಯಾವನೇ ವ್ಯಕ್ತಿ ತನಗೆ ಅಲ್ಲಿ ಗೈಯಲು ಉಳಿದಿರುವುದೇನೂ ಇಲ್ಲ, ಬದಲು ತನ್ನ ಸೌಂದರ್ಯಾತ್ಮಕ ಅಸುಖವನ್ನು ಸಹಿಸಿಕೊಂಡಿರುವುದೊಂದೇ ಹಾದಿ ಎಂಬುದಾಗಿ ಕೈಕೊಡಹಿ ಕುಳ್ಳಿರುತ್ತಿದ್ದ. ಆದರೆ ಐನ್‌ಸ್ಟೈನ್ ಹೀಗಲ್ಲ. ಸೌಂದರ್ಯಾತ್ಮಕ ಅನಿವಾರ್ಯತೆಯಿಂದ ಪ್ರೇರಿತರಾದ ಅವರು ದಿನದಿನದ ಪುರಾವೆಯನ್ನು ಹೊಸಬಗೆಯ ನೋಟದಿಂದ ಪರಿಶೀಲಿಸಿದರು. ಅವರಿಗೆ ಪರಮಾಶ್ಚರ್ಯ, ಅತ್ಯಾನಂದ: ನಿಜಕ್ಕೂ ಎಲ್ಲ ಬಗೆಯ ಚಲನೆಯನ್ನೂ ಸಾಪೇಕ್ಷವೆಂಬುದಾಗಿ ಪರಿಗಣಿಸುವಂತೆ ಆ ಪುರಾವೆಯನ್ನು ವ್ಯಾಖ್ಯಾನಿಸಬಹುದೆಂದು ಮನವರಿಕೆಯಾಯಿತು. ಈ ಒಳನೋಟ ಹೇಗೆ ಅವರನ್ನು ಭಾವಾತೀತ ಸೌಂದರ್ಯಭರಿತ ಗುರುತ್ವಾತ್ಮಕ ಸಮೀಕರಣಗಳತ್ತ ಒಯ್ದಿತು ಎಂಬುದನ್ನು ವಿವರಿಸಲು ಇದು ಸ್ಥಳವಲ್ಲ. ಆದರೆ ತಾವೊಬ್ಬ ಶ್ರದ್ಧಾವಂತ ಬುದ್ಧ್ಯೈಕ ಪ್ರಾಮಾಣ್ಯವಾದಿಯಾಗಿ ಮತಾಂತರಗೊಂಡಿದ್ದೇನೆಂದು ಅವರು ಲ್ಯಾಂಕ್ಜೋಸರಿಗೆ ಓಲೆ ಬರೆದಾಗ ಐನ್‌ಸ್ಟೈನರ ಮನಸ್ಸಿನಲ್ಲಿ ತಮ್ಮ ಬಗೆಗೆ ಯಾವ ಭಾವವಿತ್ತು ಎಂಬುದನ್ನು ನಾವು ಗ್ರಹಿಸಬಹುದು : ಗಣಿತೀಯ ಸರಳತೆಯು—ಇದೇ ಅವರ ಅರ್ಥದಲ್ಲಿ ಸೌಂದರ್ಯದ—ಒಬ್ಬ ಅನ್ವೇಷಕ.

'ಮತಾಂತರಿಸಿತು' ಎಂಬ ಪದ ನಮ್ಮನ್ನು ಗೊಂದಲಕ್ಕೆ ಕೆಡೆಯು

ಬಾರದು. ತಮ್ಮ ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತವನ್ನು ಸೃಷ್ಟಿಸುವ ಅದೆಷ್ಟೋ ಮೊದಲೇ ಐನ್‌ಸ್ಟೈನ್ ವಿಶ್ವದಲ್ಲಿ ಸೌಂದರ್ಯವನ್ನು ಅನ್ವೇಷಿಸುತ್ತಿದ್ದರು. ಸೌಂದರ್ಯಾತ್ಮಕ ಅತೃಪ್ತಿಯೇ ಈ ಸಿದ್ಧಾಂತದ ಸೆಲೆ ಎಂಬ ಸಂಗತಿ ಇದನ್ನು ಸ್ಪಷ್ಟಪಡಿಸುತ್ತದೆ. ವಿಶ್ವದ ಸರಳತೆ, ಚೆಲುವು ಮತ್ತು ಭವ್ಯತೆ ಬಗ್ಗೆ ಅವರಿಗಿದ್ದ ನಂಬಿಕೆ—ಅಂದರೆ ಅವರ ಧಾರ್ಮಿಕ ನಂಬಿಕೆ—ಅವರಿಗೆ ವಿಜ್ಞಾನದಲ್ಲಿ ಸ್ಫೂರ್ತಿಯ ಪ್ರಧಾನ ಆಕರವಾಗಿತ್ತು. ಯಾವುದೇ ವೈಜ್ಞಾನಿಕ ಸಿದ್ಧಾಂತವನ್ನು ಅವರು, ತಾವು ದೇವರಾಗಿದ್ದಿದ್ದರೆ ವಿಶ್ವವನ್ನು ಈ ರೀತಿಯಲ್ಲಿ ರಚಿಸಿರುತ್ತಿದ್ದನೇ ಎಂಬುದಾಗಿ ಸ್ವಂತಕ್ಕೆ ಪ್ರಶ್ನೆ ಹಾಕಿಕೊಂಡು, ಮೌಲ್ಯಮಾಪಿಸುತ್ತಿದ್ದರು.

ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನ್, ಲ್ಯಾಂಕ್ಜೋಸ್ ಅವರಿಗೆ ಬರೆದ ಇನ್ನೆರಡು ಕಾಗದಗಳ ಉದ್ಧೃತಾಂಶಗಳು ಇಲ್ಲಿವೆ. ೧೯೩೮ ಫೆಬ್ರುವರಿ ೧೪ರಂದು ಹೀಗೆ ಬರೆದರು :

● ವಿದ್ಯುತ್ತಿನ ಈ ಮೂಲ ಸಮಸ್ಯೆಯೊಡನೆ ನಾನೀಗ ಇಪ್ಪತ್ತು ವರ್ಷಗಳಿಗೂ ಮಿಕ್ಕಿ ಹೋರಾಡುತ್ತ ಬಂದು ಪೂರ್ತಿ ಹತಾಶೆಗೊಂಡಿದ್ದೇನೆ. ಅದನ್ನು ತೊರೆದು ಬಿಡಲಾರದವನೂ ಆಗಿದ್ದೇನೆ. ಸಂಪೂರ್ಣ ನವನವೋನ್ಮೇಷಶಾಲಿ ಮಹಾಪ್ರತಿಭಾನ್ವಿತ ಸ್ಫೂರ್ತಿ ಅವಶ್ಯವೆಂದು ದೃಢವಾಗಿದೆ. ಇದರ ಜೊತೆಯಲ್ಲೇ, ಸಂಖ್ಯಾಕಲನವಿಜ್ಞಾನ ವಿಧಾನಗಳಿಗೆ[53] ಶರಣು ಹೋಗುವುದು ಮೂಲಭೂತವಿಚಾರಗಳನ್ನೇ ಅಡ್ಡ ಹಾಯುವ ತಾತ್ಕಾಲಿಕ ಅನುಕೂಲಸಿಂಧು ಮಾರ್ಗವೆಂದು ಕೂಡ ಭಾವಿಸಿದ್ದೇನೆ. ●

೧೯೪೨ ಮಾರ್ಚ್ ೨೧ರಲ್ಲಿ ಹೀಗೆ ಬರೆದರು :

● ಭೌತವಿಜ್ಞಾನದ ಬಗೆಗೆ ನನ್ನ ನಿಲವನ್ನೇ ತಳೆದಿರುವವರು, ನನಗೆ ತಿಳಿದಿರುವಂತೆ, ನೀವೊಬ್ಬರೇ : ಮೂಲತಃ ಸರಳವೂ ಏಕೀಕೃತವೂ ಆಗಿರುವ ಯಾವುದೋ ಒಂದರ ಮೂಲಕ ಋತದ ಪರಿಗ್ರಹಣ ಸಾಧ್ಯವೆಂಬ ನಂಬಿಕೆ ....ಭಗವಂತನ ಇಸ್ಪೀಟೆಲೆಗಳತ್ತ[54] ಕಳ್ಳನೋಟ ಹಾಯಿಸುವುದು ಕಠಿಣ ಎಂದು ಭಾಸವಾಗುವುದು ನಿಜ. ಆದರೆ ಅವನು ದಾಳ ಒಗೆಯುತ್ತಾನೆ ಮತ್ತು 'ದೂರಮನಸ್ಪರ್ಶನ' ವಿಧಾನಗಳನ್ನು ಬಳಸುತ್ತಾನೆ (ಶಕಲ ಸಿದ್ಧಾಂತದ ವರ್ತಮಾನ ಪರಿಸ್ಥಿತಿ ಅವನು ಹೀಗೆ ಮಾಡಬೇಕೆಂದು ಅಪೇಕ್ಷಿಸುತ್ತದೆ) ಎಂಬುದನ್ನು ನಾನು ಕ್ಷಣ ಕಾಲ ಕೂಡ ನಂಬಲಾರೆ. ●

ನಿರ್ಧರಣೀಯತೆಯನ್ನು[55] ನಿರಾಕರಿಸಿ ಸಂಭಾವ್ಯತಾತ್ಮಕ ಸಂಖ್ಯಾಕಲನ ವೈಜ್ಞಾನಿಕ ಭವಿಷ್ಯವಾಣಿಗಳಿಗೆ ಸೀಮಿತವಾಗಿದ್ದ ಶಕಲಸಿದ್ಧಾಂತದ ಬಗೆಗೆ ಐನ್‌ಸ್ಟೈನ್ ವ್ಯಕ್ತಪಡಿಸಿದ ಅತೃಪ್ತಿಯನ್ನೂ ಆ ಸಿದ್ಧಾಂತವನ್ನು ಅವರು ಪರಿವೀಕ್ಷಿಸುತ್ತಿದ್ದ ಸುಸ್ಪಷ್ಟ ರೀತಿಯನ್ನೂ ಇಲ್ಲಿ ಕಾಣುತ್ತೇವೆ. ಶಕಲ ಸಿದ್ಧಾಂತದ ಅಭಿವರ್ಧನೆಯಲ್ಲಿ ಅವರು ಸ್ವತಃ ಒಬ್ಬ ಮೊದಲಿಗರಾಗಿದ್ದರು. ಆದರೆ ಬೇರೆಯದೇ ಆದ ಒಂದು ತಿಳಿವಳಿಕೆ ಅವಶ್ಯವೆಂಬುದರ ಬಗ್ಗೆ ಅವರಿಗೆ ದೃಢವಿಶ್ವಾಸವಿತ್ತು. ಅವರನ್ನು ಎಂದೂ ತೊರೆಯದಿದ್ದ ವೈಫಲ್ಯಭಾವ ವನ್ನು ಪಾಲ್ ಏರೆನ್‌ಫೆಸ್ಟರಿಗೆ ೧೯೨೪ ಜುಲೈ ೧೨ರಂದು ಬರೆದ ಈ ಕಾಗದ ದಲ್ಲಿ ಸುಸ್ಪಷ್ಟವಾಗಿ ನಿರೂಪಿಸಿದರು :

● ಶಕಲಗಳನ್ನು ಒಬ್ಬ ಅಧಿಕಾಧಿಕವಾಗಿ ಬೆಂಬತ್ತಿದಂತೆ ಅವು ತೀವ್ರಾತಿ ತೀವ್ರವಾಗಿ ಅವಿತುಕೊಳ್ಳುತ್ತವೆ. ●

"ಸಾಪೇಕ್ಷತಾಸಿದ್ಧಾಂತದ ಧಾರ್ಮಿಕ ನಿಬಂಧಿತಗಳು"[56] ಎಂಬುದರ ಮೇಲೆ ಉಪನ್ಯಾಸವನ್ನು ಸಿದ್ಧಪಡಿಸುತ್ತಿದ್ದ ಶಿಕಾಗೊವಿನ ಒಬ್ಬ ರಬ್ಬಿ ಪ್ರಿನ್‌ಸ್ಟನ್ನಿ ನಲ್ಲಿದ್ದ ಐನ್‌ಸ್ಟೈನರಿಗೆ ೧೯೩೯ ಡಿಸೆಂಬರ್ ೨೦ರಂದು ಕಾಗದ ಬರೆದು ಆ ವಿಷಯದ ಬಗ್ಗೆ ಕೆಲವು ಪ್ರಶ್ನೆಗಳನ್ನು ಎತ್ತಿದ. ಐನ್‌ಸ್ಟೈನ್ ಈ ಮುಂದಿ ನಂತೆ ಮಾರೋಲೆ ಬರೆದರು :

● ವೈಜ್ಞಾನಿಕ ಜ್ಞಾನದಿಂದ ಒಟ್ಟಾರೆ ಭಿನ್ನವಾದ ಧಾರ್ಮಿಕ ವಲಯ ದೊಡನೆ ಸಾಪೇಕ್ಷತಾಸಿದ್ಧಾಂತದ ಮೂಲಭಾವನೆಗಳಿಗೆ ಏನಾದರೂ ಸಂಬಂಧ ಸ್ಥಾಪಿಸಬಹುದೆಂಬುದನ್ನು ನಾನು ನಂಬಲಾರೆ. ಜ್ಞೇಯ ಜಗತ್ತಿನ ಪ್ರಗಲ್ಭ ಅಂತರಸಂಬಂಧಗಳನ್ನು ಸರಳ ತಾರ್ಕಿಕ ಪರಿಕಲ್ಪನೆಗಳ ಮೂಲಕ ಪರಿಗ್ರಹಿಸುವುದು ಸಾಧ್ಯ ಎಂಬ ಸಂಗತಿಯಲ್ಲಿ ಧರ್ಮ ಮತ್ತು ವಿಜ್ಞಾನ ಇವುಗಳ ನಡುವೆ ಒಂದು ಕೊಂಡಿಯನ್ನು ಕಾಣುತ್ತೇನೆ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ವಿಶೇಷವಾಗಿ ಸಾಪೇಕ್ಷತಾ ಸಿದ್ಧಾಂತದಲ್ಲಿ ಇದು ಪೂರ್ಣ ಪ್ರಮಾಣದಲ್ಲಿ ನಿಜ.

ಪ್ರಗಲ್ಭ ಅಂತರಸಂಬಂಧಗಳ ತಾರ್ಕಿಕ ಪರಿಗ್ರಹಣಶೀಲತೆಯನ್ನು ಅನುಭವಿ ಸಿದಾಗ ಒಬ್ಬನಲ್ಲಿ ಸಂಜನಿಸುವ ಧಾರ್ಮಿಕಭಾವ ಆತ ಸಾಮಾನ್ಯವಾಗಿ ಧಾರ್ಮಿಕ ಎಂದು ಕರೆಯುವ ಭಾವಕ್ಕಿಂತ ಒಂದು ರೀತಿಯಲ್ಲಿ ಬೇರೆಯಾ ದದ್ದು. ಬಲುಮಟ್ಟಿಗೆ ಅದು ದ್ರವ್ಯಾತ್ಮಕ ವಿಶ್ವದಲ್ಲಿ ಪ್ರಕಟಗೊಳ್ಳುತ್ತಿರುವ

ಕ್ರಮವನ್ನು ಕುರಿತ ಬೆರಗಿನ ಭಾವ. ನಮ್ಮ ಸ್ವಂತ ಪ್ರತಿಬಿಂಬದಂತಿರುವ ದೇವಸದೃಶ ವ್ಯಕ್ತಿಯನ್ನು—ಅಂದರೆ ನಮ್ಮ ಮೇಲೆ ಬೇಡಿಕೆಗಳನ್ನು ಹೇರುವ ಮತ್ತು ನಮ್ಮ ಪೈಕಿ ಒಬ್ಬೊಬ್ಬನಲ್ಲೂ ಆಸಕ್ತಿ ತಳೆಯುವ ಒಂದು ವ್ಯಕ್ತಿ ವಿಶೇಷನನ್ನು—ರೂಪಿಸುವತ್ತ ಈ ಭಾವ ನಮ್ಮನ್ನು ಒಯ್ಯುವುದಿಲ್ಲ. ಇದರಲ್ಲಿ ಸಂಕಲ್ಪವಿಲ್ಲ, ಗಮ್ಯವಿಲ್ಲ, ಹೀಗೆಯೇ ಆಗತಕ್ಕದ್ದೆಂಬುದೂ ಇಲ್ಲ. ಬದಲು, ಕೇವಲ ಅಸ್ತಿತ್ವವೊಂದೇ. ಈ ಕಾರಣದಿಂದಲೇ ನಮ್ಮಂಥವರು ನೈತಿಕತೆಯಲ್ಲಿ ಶುದ್ಧ ಮಾನವದ್ರವ್ಯವನ್ನು ಕಾಣಬಹುದಾಗಿದೆ. ಹಾಗಿದ್ದರೂ ಇದು ಮಾನವ ವಲಯದಲ್ಲಿ ಅತಿ ಮುಖ್ಯವಾದದ್ದು. ●

ಐನ್‌ಸ್ಟೈನರ ಈ ಮುಂದಿನ ಬರೆಹದ ತಾರೀಕು ಸೆಪ್ಟೆಂಬರ್ ೧೯೩೭. 'ಪ್ರಚಾರ ನಿಯೋಗ'ವೊಂದಕ್ಕೆ ಇದು ಉದ್ದೇಶಿತವಾಗಿದೆ ಎಂಬುದಕ್ಕಿಂತ ಆಚೆಗೆ ಯಾವ ಸನ್ನಿವೇಶದಲ್ಲಿ ಇದನ್ನು ಬರೆಯಲು ಅವರಿಗೆ ಪ್ರೇರಣೆ ಸ್ಫುರಿಸಿತೆಂಬುದರ ಬಗೆಗೆ ಉಪಯುಕ್ತ ಮಾಹಿತಿ ಏನೂ ತಿಳಿದಿಲ್ಲ. ಪ್ರಿನ್‌ಸ್ಟನ್ ತಿಯಾಲಾಜಿಕಲ್ ಸೆಮಿನರಿಯ ಒಬ್ಬ ಸದಸ್ಯನ ವೈಯಕ್ತಿಕ ಪ್ರಾರ್ಥನೆ ಮನ್ನಿಸಿ ಇದನ್ನು ಬರೆದುದಾಗಿರಬಹುದು. ಆದರೆ ಇದು ಶುದ್ಧ ಊಹೆ:

● ವೈಜ್ಞಾನಿಕ ಅರಿವಿನ ಕ್ಷೇತ್ರಗಳಲ್ಲಿಯ ಅದ್ಭುತ ಸಿದ್ಧಿಗಳಿಂದ ಮತ್ತು ಹೀಗೆ ಲಭ್ಯವಾದ ಒಳನೋಟಗಳ ತಾಂತ್ರಿಕ ಅನ್ವಯದಿಂದ ನಮ್ಮ ಕಾಲ ಪ್ರಸಿದ್ಧವಾಗಿದೆ. ಯಾರಿಗೆ ತಾನೇ ಇದರಿಂದ ಉತ್ಸಾಹ ಪುಟಿಯುವುದಿಲ್ಲ? ಆದರೆ ಜ್ಞಾನ ಮತ್ತು ಕೌಶಲಗಳು ಮಾತ್ರ ಜನತೆಯನ್ನು ಸಂತೋಷಭರಿತ ಮತ್ತು ಗಾಂಭೀರ್ಯಪೂರ್ಣ ಜೀವನದತ್ತ ಒಯ್ಯಲಾರವೆಂಬುದನ್ನು ಮರೆಯದಿರೋಣ. ಜ್ಞೇಯನಿಷ್ಠ ಸತ್ಯವನ್ನು ಆವಿಷ್ಕರಿಸಿದವರಿಗಿಂತ ಮೇಲಿನ ಮಟ್ಟದಲ್ಲಿ ಉಚ್ಚ ನೈತಿಕ ಪ್ರಾಮಾಣ್ಯಗಳನ್ನೂ ಮೌಲ್ಯಗಳನ್ನೂ ಸಾರಿದ ಪ್ರವಾದಿಗಳನ್ನು ಇರಿಸಲು ಜನತೆಗೆ ಯೋಗ್ಯ ಕಾರಣ ಉಂಟು. ಅನ್ವೇಷಕ ಮತ್ತು ರಚನಾತ್ಮಕ ಮನಸ್ಸಿನ ಸಮಸ್ತ ಸಿದ್ಧಿಗಳಿಗಿಂತಲೂ ಹೆಚ್ಚಾಗಿ ಜನತೆ ಬುದ್ಧ, ಮೋಸೆಸ್ ಮತ್ತು ಜೀಸಸ್ ಇವರಂಥ ಮಹಾಪುರುಷರ ಕೊಡುಗೆಗಳಿಗೆ ಹೆಚ್ಚು ಋಣಿಯಾಗಿರಬೇಕೆಂದು ನನಗೆ ತೋರುತ್ತದೆ. ಜನತೆ ತನ್ನ ಗಾಂಭೀರ್ಯವನ್ನು, ತನ್ನ ಅಸ್ತಿತ್ವದ ಸುರಕ್ಷಣೆಯನ್ನು, ಮತ್ತು ಬದುಕುವುದರಲ್ಲಿ ತನ್ನ ಆನಂದವನ್ನು ಕಳೆದುಕೊಳ್ಳದಿರಬೇಕಾದರೆ

ಈ ಧನ್ಯಾತ್ಮರು ನಮಗೇನನ್ನು ದಯಪಾಲಿಸಿರುವರೊ ಅದನ್ನು ನಾವು ಕಾಪಾಡಬೇಕು ಮತ್ತು ನಮ್ಮ ಸಮಸ್ತ ತ್ರಾಣದಿಂದ ಜೀವಂತವಾಗಿರಿಸಲು ಪ್ರಯತ್ನಿಸಬೇಕು. ●

೧೯೩೨-೩೩ರ ಚಳಿಗಾಲದಲ್ಲಿ ಐನ್‌ಸ್ಟೈನ್ ಕೊನೆಯ ಬಾರಿಗೆ ಪ್ಯಾಸಡೀನದಲ್ಲಿ ತಂಗಿದ್ದರು. ಅಲ್ಲಿಂದ ಲೇಕಾರ್ಕ್‌ಗೆ ತಂದಂಥ ಅನೇಕ ಬಾಬುಗಳ ಪೈಕಿ ಈ ಮುಂದಿನದರ ಜರ್ಮನ್ ಕರಡೂ ಸೇರಿತ್ತು. ಈ ಕಾಗದದ ತುಣುಕಿನ ಮೇಲೆ ಯಾವ ತಾರೀಕೂ ಕಾಣಿಸದು. ಸಂದರ್ಭ ಯಾವುದೆಂಬುದು ಕೂಡ ತಿಳಿಯದು. ಒಬ್ಬ ವ್ಯಕ್ತಿಯಿಂದ, ಅಥವಾ ಸಮುದಾಯದಿಂದ ಬಂದಿದ್ದ ಕಾಗದಕ್ಕೆ ಮಾರೋಲೆಯಾಗಿ ಈ ಮಾತುಗಳನ್ನು ಬರೆದಿರಬಹುದು. ಇಲ್ಲವೇ ನಾಟ್ಸೀ ಬಡಾಯಿಕೋರತನದಿಂದ ಪ್ರೇರಿತವಾದ ಚಾಟೂಕ್ತಿಯೂ ಆಗಿರಬಹುದು. ಸರ್ವರಿಗೂ ಉದ್ದೇಶಿತವಾದ ಒಂದು ಸ್ವತಂತ್ರ ಸಂದೇಶವಾಗಿ ಈ ಮಾತುಗಳು ನಿಂತಿರುವುದಂತೂ ಖಾತ್ರಿ :

● ಈ ಭೂಮಿಯಲ್ಲಿ ನಿಮ್ಮ ಯಾವ ಯೋಗ್ಯತೆಯ ಫಲವಾಗಿಯೂ ಅಲ್ಲದೆ ಶತಮಾನಗಳ ಅವಧಿಯಲ್ಲಿ ಜನಿಸಿದ ಕೆಲವೇ ಮಹಾತ್ಮರ ನಾಮ ಜಪಿಸುತ್ತ ಜಂಬ ಮಾಡಬೇಡಿ. ಬದಲು, ಅವರನ್ನು ಆಯಾ ಕಾಲದಲ್ಲಿ ಹೇಗೆ ನಡೆಸಿಕೊಂಡಿರಿ ಮತ್ತು ಅವರ ಬೋಧನೆಗಳನ್ನು ಹೇಗೆ ಅನುಷ್ಠಾನಕ್ಕೆ ತಂದಿರಿ ಎಂಬವುಗಳ ಮೇಲೆ ಚಿಂತನೆ ಹರಿಸಿ. ●

ಪ್ರಚಲಿತ ತಂತ್ರವಿದ್ಯೆಯಲ್ಲಿ ಸಾಧಿಸಲಾದ ಅದ್ಭುತ ಸಿದ್ಧಿಗಳಿಂದ ಭ್ರಮನಿರಸನಗೊಂಡಿದ್ದ ಒಬ್ಬ ಪತ್ರಕರ್ತ ಬರ್ಲಿನ್‌ವಾಸಿ ಐನ್‌ಸ್ಟೈನರಿಗೆ ತೀವ್ರ ನಿರಾಶೆ ಸೂಸುವ ಒಂದು ಕಾಗದ ಬರೆದ—೧೯೩೧ ಫೆಬ್ರುವರಿ ೨೮ರಂದು. ಹೆಚ್ಚಿನ ಮಂದಿಗೆ ಬದುಕು ಹತಾಶೆಗಳ ಒಂದು ಕಗ್ಗಂಟು. ಪರಿಸ್ಥಿತಿ ಹೀಗಿರುವಾಗ ಮನುಕುಲವನ್ನು ವೃದ್ಧಿಸಿಕೊಂಡು ಹೋಗುವುದರಲ್ಲಿ ಏನಾದರೂ ಅರ್ಥವಿದೆಯೇ ? ಇದು ಆತನ ಸಂದೇಹ. ಐನ್‌ಸ್ಟೈನ್ ೧೯೩೧ ಏಪ್ರಿಲ್ ೭ರಂದು ಈ ತೆರನಾಗಿ ಮಾರೋಲೆ ಬರೆದರು :

● ನಾನು ನಿಮ್ಮ ಅಭಿಪ್ರಾಯದೊಡನೆ ಸಹಮತನಾಗಿಲ್ಲ. ಖುದ್ದು ನನ್ನದೇ ಬದುಕು ಕುತೂಹಲಕಾರಿ ಮತ್ತು ಅರ್ಥಪೂರ್ಣ ಎಂಬುದಾಗಿ ನಾನು ಸದಾ ಭಾವಿಸಿದ್ದೇನೆ. ಜನರ ಜೀವನವನ್ನು ಒಟ್ಟಾರೆ ಸಾರ್ಥಕವಾಗಿ

ಮಾಡುವುದು ಸಾಧ್ಯವೂ ಹೌದು, ಪ್ರಾಯಿಕವೂ ಹೌದು ಎಂಬುದು ನನ್ನ ಅಚಲ ನಂಬಿಕೆ. ಇದು ಕೈಗೂಡಲು ಅಗತ್ಯವಾದ ಗವ್ಯ ಮತ್ತು ಸಾಧ್ಯತೆಗಳು ಇವೆಯೆಂದು ತೋರುತ್ತದೆ. ●

ಹೀಗಿದ್ದರೂ ದುಃಖ ಬದುಕಿನ ಒಂದು ಅಂಗ ಎಂಬುದರ ಪರಿವೆ ಇವರಿಗಿತ್ತು. ತಮ್ಮ ಮೊಮ್ಮಗುವನ್ನು, ಅಥವಾ ಪ್ರಾಯಶಃ ಮಗುವನ್ನು ಕಳೆದುಕೊಂಡಿದ್ದ, ಒಬ್ಬ ವೈದ್ಯಕೀಯ ಡಾಕ್ಟರ್ ಮತ್ತು ಆತನ ಪತ್ನಿಗೆ ಐನ್‌ಸ್ಟೈನ್ ೧೯೪೫ ಏಪ್ರಿಲ್ ೨೬ರಂದು ಈ ಮುಂದಿನ ಸಾಂತ್ವನ ಪತ್ರ ಬರೆದರು. ನಾಟ್ಸೀ ಜರ್ಮನಿಯಿಂದ ಹೊರ ಹರಿಯುತ್ತಿದ್ದ ನಿರಾಶ್ರಿತರಿಗೆ ನೆರವು ಒದಗಿಸುವಲ್ಲಿ ಈ ವೈದ್ಯ ತುಂಬ ಚಟುವಟಿಕೆಯಿಂದ ದುಡಿದಿದ್ದರು :

● ನಿಮ್ಮಿಬ್ಬರ ಮೇಲೆ ಹಠಾತ್ತಾಗಿ ಮತ್ತು ಅನಿರೀಕ್ಷಿತವಾಗಿ ಕೆಡೆದ ಕುಠಾರಾಘಾತದ ಸುದ್ದಿ ತಿಳಿದು ನನಗೆ ಗರಬಡಿದಂತಾಗಿದೆ. ವೃದ್ಧ ಜನರಿಗೆ ಒದಗಬಹುದಾದ ಅತಿ ಘೋರವೇದನೆ ಇದು. ನಮಗೆ ಅಜ್ಞಾತರಾಗಿರುವ ಸಾವಿರಾರು ಮಂದಿ ಇದೇ ತೆರನಾಗಿ ಸಂತಾಪಪೀಡಿತರಾಗಿರುತ್ತಾರೆಂಬ ಸಂಗತಿ ನಮಗೇನೂ ಸಮಾಧಾನವೀಯುವುದಿಲ್ಲ. ನಿಮ್ಮನ್ನು ಸಂತೈಸಿಯೇನೆಂಬ ಭ್ರಮೆ ನನಗಿಲ್ಲ. ಆದರೆ ನಿಮ್ಮ ದಯಾರ್ದ್ರ ಹೃದಯವಂತಿಕೆಯನ್ನು ಅರಿತ ಎಲ್ಲವರಂತೆ ನಾನು ಕೂಡ ಎದೆಯಾಳದಿಂದ ನನ್ನ ಶೋಕಪೂರಿತ ಅನುಕಂಪವನ್ನು ನಿಮಗೆ ಸಲ್ಲಿಸಬಯಸುತ್ತೇನೆ.

ನಮ್ಮ ಜೀವನದ ಅಧಿಕಾಂಶವನ್ನು ನಾವು ಮನುಷ್ಯರು ತೋರ್ಕೆಗೆ ಸುಪರಿಚಿತವೂ ವಿಶ್ವಾಸಾರ್ಹವೂ ಆದ ಭೌತ ಮತ್ತು ಮಾನವೀಯ ಪರಿಸರದಲ್ಲಿದ್ದೇವೆಂಬ ಮಿಥ್ಯಾಕಲ್ಪನೆಯಿಂದಲೂ ಸ್ವಗೃಹದಲ್ಲಿ ಒದಗುವ ಸ್ವಾಸ್ಥ್ಯ ಭಾವದಿಂದಲೂ ಬಾಳುತ್ತಿದ್ದೇವೆ. ಆದರೆ ನಮ್ಮ ದೈನಂದಿನ ಜೀವನದ ನಿರೀಕ್ಷಿತ ಗತಿಗೆ ತಡೆ ಎದುರಾದಾಗ ನಮ್ಮ ಸ್ಥಿತಿ ಹಡಗೊಡೆದು ನೀರಿಗೆಸೆಯಲ್ಪಟ್ಟು, ವಿಶಾಲಸಾಗರದ ಮಹಾವಿಸ್ತಾರದಲ್ಲಿ ಕೈಗೆಟುಕಿದ ಮರದ ಹಲಗೆಯನ್ನು ಬಿಗಿದಪ್ಪಿಕೊಂಡು, ಎಲ್ಲಿಂದ ಬಂದೆವೋ ಎಲ್ಲಿಗೆ ಕೊಚ್ಚಿಕೊಂಡು ಹೋಗುವೆವೋ ಎಂಬುದರ ಅರಿವಿಲ್ಲದೆ, ಜೀವನ್ಮರಣ ಹೋರಾಟ ನಡೆಸುತ್ತಿರುವ ಹೊನಲು ಪಾಲಾದವರ ಸ್ಥಿತಿಯಂತೆ ಎಂಬದು ಸುವೇದ್ಯವಾಗು

ತ್ತದೆ. ಆದರೆ ಒಮ್ಮೆ ಈ ಪರಿಸ್ಥಿತಿಯನ್ನು ಅಂಗೀಕರಿಸಿದೆವೋ ನಮ್ಮ ಬದುಕು ಬಲು ಸುಗಮವಾಗುತ್ತದೆ. ಅಲ್ಲಿಂದ ಮುಂದಕ್ಕೆ ಯಾವ ಹತಾಶೆಯೂ ನಮ್ಮ ಬಳಿ ಸುಳಿಯದು.

ನಾವು ಹಿಡಿದು ಈಸುತ್ತಿರುವ ಹಲಗೆಗಳು ಬೇಗ ಸಂಧಿಸಿಯಾವೆಂದು ಆಶಿಸೋಣ.

ನಿಮ್ಮ ಆತ್ಮೀಯ ●

ಕಾರ್ನೀಲಿಯಸ್ ಲ್ಯಾಂಕ್ರೋಸ್ ಅವರಿಗೆ ಐನ್‌ಸ್ಟೈನ್ ೧೯೫೨ ಜುಲೈ ೯ರಂದು ಬರೆದ ಕಾಗದದಿಂದ ಉದ್ಧರಿಸಿದ ಒಂದು ವಾಕ್ಯ :

● ಎಮ್ಮೆಗಳ ಹಿಂಡಿನ ನಡುವೆ ಒಬ್ಬ ಹುಟ್ಟುತ್ತಾನೆ. ಆತ ತನ್ನ ಕಾಲ ಸಂದಾಯವಾಗುವ ಮೊದಲೇ ಅವುಗಳ ಕಾಲತುಳಿತದಿಂದ ಅಪ್ಪಚ್ಚಿ ಆಗದೇ ಹೋದರೆ ಅದಕ್ಕಾಗಿ ಸಂತೋಷಪಡಲೇಬೇಕು. ●

ಬಲು ಚಿಕ್ಕದಾದ, ಮತ್ತು ಆ ತನಕ ತಿಳಿದಿರದಿದ್ದ, ಹೂಬಿಡುವ ಕಳ್ಳಿಯ ಹೊಸ ಪ್ರಭೇದವೊಂದನ್ನು ಸಸ್ಯವಿಜ್ಞಾನಿ ಎ.ವಿ. ಫ್ರಿಕ್ ಎಂಬವರು ಕಾರ್ಡಿಲ್ಲೆರಾ ಪರ್ವತ ಶ್ರೇಣಿಯ ಅತ್ಯುನ್ನತ ಶಿಖರದ ವಿರಳ ವಾಯುಮಂಡಲದಲ್ಲಿ ಪತ್ತೆಹಚ್ಚಿದರು. ತುಂಬ ನಯವಾಗಿ ನಿರೂಪಿಸಲಾದ ವರದಿಯಲ್ಲಿ ಅವರು ಆ ಪ್ರಭೇದಕ್ಕೆ 'ಐನ್‌ಸ್ಟೈನಿಯ' ಎಂಬ ಹೆಸರಿಟ್ಟು ವರದಿಯ ಒಂದು ಪ್ರತಿಯನ್ನು ಐನ್‌ಸ್ಟೈನರಿಗೆ ರವಾನಿಸಿದರು. ೧೯೩೩ ಸೆಪ್ಟೆಂಬರ್ ೯ರಂದು ಐನ್‌ಸ್ಟೈನ್ ಲೇಕಾಕ್‌ನಿಂದ ಮಾರೋಲೆ ಬರೆದರು :

● ಮಾನ್ಯರೆ

ನಿಮ್ಮ ಗಂಭೀರ ಚಿಂತನಶೀಲ ಕ್ರಿಯೆ ನನಗೆ ಅಮಿತ ಮುದವಿತ್ತಿದೆ. ನೀವು ಮಾಡಿರುವ ನಾಮಕರಣ ಯುಕ್ತವಾಗಿದೆ—ಎಷ್ಟರಮಟ್ಟಿಗೆ ಎಂದರೆ ಆ ಪುಟ್ಟ ಸಸ್ಯ ಮಾತ್ರವಲ್ಲ ಖುದ್ದು ನಾನು ಕೂಡ ಆ ಸ್ವರ್ಗೀಯ ಔನ್ನತ್ಯದಲ್ಲಿ ಶಾಂತಿಯಿಂದ ಉಳಿಯುವುದು ಸಾಧ್ಯವಾಗದು.

ಸಂತೃಪ್ತಿದಾಯಕವಾದ ನಿಮ್ಮ ಈ ಸದ್ವರ್ತನೆಯನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ. ಇತಿ ●

ಶ್ರೀಮತಿ ಕಾರ್ನೀಲಿಯಾ ವೂಲ್ಫ್ ಎಂಬವರು ಐನ್‌ಸ್ಟೈನರ ಹಳೆಯ ಗೆಳತಿ. ಇವರಿಗೆ ಐನ್‌ಸ್ಟೈನ್ ೧೯೨೭ರಲ್ಲಿ ತಮ್ಮ ಛಾಯಾಚಿತ್ರವನ್ನು ಕಳಿಸಿದರು. ಅದರ ತಳದಲ್ಲಿ ಈ ಮುಂದಿನ ಸಾಲುಗಳನ್ನು ಬರೆದು ಸಹಿ ಹಾಕಿದ್ದರು. ಅವುಗಳ ಅನುವಾದವಿದು :

● ಎಲ್ಲೇ ಹೋಗಲಿ ಎಲ್ಲೇ ತಂಗಲಿ
ಕಾಣ್ಬುದು ನನ್ನಯ ತಸಬೀರ್ : ಮೋಜಿನ
ಮೇಲ್ಗಡೆ, ಕೊಠಡಿಯ ಒಳಗಡೆ, ಕೊರಳಿನ
ಉರುಳಲಿ, ಅಥವಾ ಗೋಡೆಯ ಕೊಡಿಯಲಿ !

ಹೆಂಗಸು ಗಂಡಸರೆಲ್ಲರಿಗಿದು ಬಲು ಮೋಜಿನ ಆಟ
ಅನುನಯ ವಿನಯದಿ ದಸ್ಕತ್ತನು ಯಾಚಿಸುವೀ ಹೂಟ !
ಘನ ವಿದ್ವಾಂಸನ ನುಡಿಮುತ್ತಿವರಿಗೆ ಅಗದು ಪಥ್ಯ
ಆತನ ಗೀಚಿಕೆಯೊಂದೇ ಇವರಿಗೆ ಶಾಶ್ವತ ತಥ್ಯ !

ಸಂತಸ ಸಂಭ್ರಮ ಪರಿವೇಷ್ಟಿತನಾಂ ವಿಭ್ರಮೆಗೊಂಡಿದೆ
ಮತಿ ಹೊಗಳಿಕೆಯಂ ಕೇಳುತ—ಬುದ್ಧಿಗೆ ಕಾವಳ ಕವಿಯದ
ವೇಳೆಯೊಳಚ್ಚರಿ ಪಡುವೆಂ : ಪಿಡಿದಿದೆ ನನಗುನ್ಮಾದ
ನಿಜಕೂ ಈ ಜನ ಜಂಗುಳಿ ಮನ ನೆಮ್ಮದಿ ಭಾವದೊಳಿದೆ ! ●

ಈ ಪದ್ಯಲಿಖಿತ ಛಾಯಾಚಿತ್ರವನ್ನು ಕುರಿತು ಸ್ವಾರಸ್ಯಕರವಾದ ಕತೆಯೊಂದುಂಟು. ಎರಡನೆಯ ಮಹಾಯುದ್ಧದ ದಿನಗಳಂದು ಶ್ರೀಮತಿ ವೂಲ್ಫ್ ಅಂತಿಮವಾಗಿ ಕ್ಯಾಲಿಫೋರ್ನಿಯಾವನ್ನು ತಲಪುವ ಉದ್ದೇಶದಿಂದ ಆ ಹಾದಿಯಲ್ಲಿದ್ದ ಹವಾನಾಕ್ಕೆ ಸಾಗರಯಾನ ಮಾಡುತ್ತಿದ್ದರು. ಜಹಜು ಟ್ರನಿಡಾಡಿನಲ್ಲಿ ಲಂಗರುಹೂಡಿತು. ಅಲ್ಲಿ ಒಬ್ಬ ಬ್ರಿಟಿಶ್ ಅಧಿಕಾರಿ ಇವರನ್ನು ಪ್ರಶ್ನಿಸಿದ (ಇವರ ಹತ್ತಿರವಿದ್ದುದು ಜರ್ಮನ್ ರಹದಾರಿ), ಮತ್ತು ಇವರ ಗಂಟುಮೂಟೆಗಳನ್ನು ತಪಾಸಿಸತೊಡಗಿದ. ಪ್ರಯಾಣಿಕರು ತಮ್ಮೊಡನೆ ಛಾಯಾಚಿತ್ರಗಳನ್ನಾಗಲಿ ಪತ್ರಗಳನ್ನಾಗಲಿ ಕೊಂಡೊಯ್ಯಲು ಬ್ರಿಟಿಷರು ಅನುಮತಿ ನೀಡಲಾರರೆಂದು ಶ್ರೀಮತಿ ವೂಲ್ಫರಿಗೆ ತಿಳಿದಿದ್ದರೂ ಐನ್‌ಸ್ಟೈನರ ಛಾಯಾಚಿತ್ರವನ್ನು ಮಾತ್ರ ಹಿಂದೆಬಿಟ್ಟು ಬರುವುದು ಅಸಹನೀಯವಾಗಿತ್ತು. ಆ ಅಧಿಕಾರಿ ಐನ್‌ಸ್ಟೈನರ ಛಾಯಾಚಿತ್ರ ಕಂಡ ಕ್ಷಣ ಪ್ರಶ್ನೆ ಕೇಳುವುದನ್ನು ನಿಲ್ಲಿಸಿದ. ಅದರಲ್ಲಿದ್ದ ಪದ್ಯವನ್ನು ನಕಲು ಮಾಡಲು ಮತ್ತು ತನ್ನ ಸಹೋದ್ಯೋಗಿಗಳಿಗೆ ತೋರಿಸಲು ಅದನ್ನು ಎರವಲಾಗಿ ಪಡೆಯಬಹುದೇ ಎಂದು ತುಂಬ ವಿನಯದಿಂದ ಯಾಚಿಸಿದ. ಛಾಯಾ

ಚಿತ್ರವನ್ನು ಸ್ವಂತಕ್ಕೆ ಇಟ್ಟುಕೊಳ್ಳುವುದು ಕೂಡ ಆತನ ಅಧಿಕಾರವ್ಯಾಪ್ತಿಗೆ ಒಳಪಟ್ಟದ್ದೆಂದು ಶ್ರೀಮತಿ ಪೂಲ್ಸ್ ಹೇಳಿದರು. ಆದರೆ ಮರುದಿನ ಹಡಗು ಹೊರಡುವ ಮೊದಲೇ ತಾನು ಅದನ್ನು ಇವರಿಗೆ ಮರಳಿಸುವುದಾಗಿ ಆಶ್ವಾಸಿಸಿದ. ತದನುಗುಣವಾಗಿ ಆತ ಅತ್ಯಂತ ವಿನಯದಿಂದ ವರ್ತಿಸಿದುದು ಮಾತ್ರವಲ್ಲ, ಮುಂದೆ ಇವರನ್ನು ಯಾವುದೇ ಪ್ರಶ್ನಾವಳಿಗೆ ಒಳಪಡಿಸಲಿಲ್ಲ, ಅಥವಾ ಇವರ ಗಂಟುಮೂಟೆಗಳನ್ನು ತಪಾಸಣೆ ಮಾಡಲಿಲ್ಲ.

ಐನ್‌ಸ್ಟೈನ್ ಒಬ್ಬ ಉತ್ಸಾಹೀ ಪಿಟೀಲುವಾದನಕಾರ. ಪಿಟೀಲು ಇವರ ಅವಿಭಾಜ್ಯ ಸಂಗಾತಿ. ಹದಿನೆಂಟನೆಯ ಶತಮಾನದ ಕೃತಿಕಾರರು ಇವರಿಗೆ ಅಚ್ಚುಮೆಚ್ಚು. ಬಾಕ್[57] ಮತ್ತು ಮೊರ್ಜ಼ಾರ್ಟ್[37] ಎಂಬವರ ಸಂಗೀತದ ಬಗ್ಗೆ ಇವರಿಗೆ ತುಂಬ ಒಲವು. ಬೇಟೋವನ್[58] ಬಗ್ಗೆ ಒಲವಲ್ಲ, ಮೆಚ್ಚುಗೆ. ತರುವಾಯದ ಕೃತಿಕಾರರ ಬಗ್ಗೆ ಇವರು ಹೆಚ್ಚಿನ ಆಸಕ್ತಿಯನ್ನೇನೂ ಬೆಳೆಸಿ ಕೊಳ್ಳಲಿಲ್ಲ.

ಐನ್‌ಸ್ಟೈನರ ಖ್ಯಾತಿ ಪ್ರಪಂಚವ್ಯಾಪಿ ಆದಂತೆ ಇವರ ಬದುಕಿನ ಸಮಸ್ತ ಮುಖಗಳ ಬಗ್ಗೆ ಜನರಲ್ಲಿ ತೀವ್ರವಾದ, ಮತ್ತು ಅನೇಕ ವೇಳೆ ಉಪದ್ರವ ಕಾರಿ ಎನ್ನಿಸಬಹುದಾದ, ಕುತೂಹಲ ಹುಟ್ಟಿತು. ಎಂದೇ ಜರ್ಮನಿಯ ಒಂದು ಸಚಿತ್ರವಾರಪತ್ರಿಕೆ ಬರ್ಲಿನ್ನಿನಲ್ಲಿದ್ದ ಐನ್‌ಸ್ಟೈನರಿಗೆ, ೧೯೨೮ರಲ್ಲಿ ಯೋಹನ್ ಸೆಬಾಸ್ಟಿಯನ್ ಬಾಕ್‌ನನ್ನು ಕುರಿತು ಒಂದು ಪ್ರಶ್ನಾವಳಿ ಕಳಿಸಿದಾಗ, ಐನ್‌ಸ್ಟೈನ್ ಅದನ್ನು ಕಡೆಗಣಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಸಂಪಾದಕ ಒಂದಷ್ಟು ಕಾಲ ಕಾದು ನೋಡಿ, ೧೯೨೮ರ ಮಾರ್ಚ್ ೨೪ ರಂದು, ಎರಡನೆಯ ಸಲ ಪ್ರಾರ್ಥನೆ ಸಲ್ಲಿಸಿದ. ಇದಕ್ಕೆ ಐನ್‌ಸ್ಟೈನ್ ಆದೇ ದಿನ—ಆ ದಿನಗಳಂದು ಟಪ್ಪಾಲು ಚುರುಕಾಗಿರುತ್ತಿತ್ತು—ಸ್ವಲ್ಪ ಒರಟಾಗಿ ಹೀಗೆ ಉತ್ತರಿಸಿದರು :

● ಬಾಕ್‌ನ ಜೀವನಕೃತಿಯ ಬಗ್ಗೆ ನಾನು ಹೇಳಬೇಕಾದ್ದಿದು : ಆಲಿಸಿ, ನುಡಿಸಿ, ಪ್ರೀತಿಸಿ, ಆರಾಧಿಸಿ—ಮತ್ತು ಬಾಯಿ ಮುಚ್ಚಿ ತೆಪ್ಪಗಿರಿ. ●

ಅದೇ ವರ್ಷ ಮುಂದೊಂದು ದಿನ ಬೇರೊಂದು ಪ್ರಕಾಶನ ಸಂಸ್ಥೆ ಐನ್‌ಸ್ಟೈನ ರನ್ನು ಇನ್ನೊಬ್ಬ ಕೃತಿಕಾರನ ಬಗ್ಗೆ ಪ್ರಶ್ನೆ ಕೇಳುವ ಪರಿಸ್ಥಿತಿ ಒದಗಿ ಬಂದಿತು. ೧೯೨೮ರ ನವೆಂಬರ್ ೧೦ರಂದು ಇವರು ಈ ಮುಂದಿನಂತೆ ಮಾರೋಲೆ ಬರೆದರು :

● ಶೂಬರ್ಟನ[59] ಬಗ್ಗೆ ನಾನು ಹೇಳಬೇಕಾದದ್ದು ಇಷ್ಟು ಮಾತ್ರ : ಕೃತಿಯನ್ನು ನುಡಿಸಿ, ಪ್ರೀತಿಸಿ—ಮತ್ತು ಬಾಯಿ ಮುಚ್ಚಿ ! ●

ಸುಮಾರು ಹತ್ತುವರ್ಷಗಳ ತರುವಾಯದ ಘಟನೆ. ಐನ್‌ಸ್ಟೈನರ ಸಂಗೀತಾಭಿರುಚಿಗಳನ್ನು ಕುರಿತ ತೀವ್ರ ಪರಿಶೋಧಕ ಪ್ರಶ್ನಾವಳಿಯೊಂದು ತೀರ ಬೇರೆಯದೇ ಆದ ಒಂದು ಮೂಲದಿಂದ ಬಂದಿತು. ಸಾಕಷ್ಟು ವಿವರಣೆ ಸಮೇತ ಇವರು ಅದನ್ನು ಉತ್ತರಿಸಿದರು. ಪ್ರಶ್ನಾವಳಿ ಕಳೆದುಹೋಗಿದೆ ಎಂದು ತೋರುತ್ತದೆ. ಆದರೆ ಐನ್‌ಸ್ಟೈನರ ಪ್ರತಿಕ್ರಿಯೆಗಳನ್ನು ಗಮನಿಸಿ ಸಂಬಂಧಿತ ಪ್ರಶ್ನೆಗಳೇನಾಗಿದ್ದಿರಬಹುದೆಂದು ಹೆಚ್ಚುಕಡಿಮೆ ಕಲ್ಪಿಸಿಕೊಳ್ಳುವುದು ಸುಲಭ. ಐನ್‌ಸ್ಟೈನರ ಉತ್ತರಕ್ಕೆ ತಾರೀಕು ಇಲ್ಲ, ಇಸವಿ ಮಾತ್ರ ೧೯೩೯ :

೧ ಸಂಗೀತದಲ್ಲಿ ಬಾಕ್, ಮೊಜಾರ್ಟ್, ಮತ್ತು ಇಟಲಿಯ ಹಾಗೂ ಇಂಗ್ಲೆಂಡಿನ ಕೆಲವು ಕೃತಿಕಾರರು ನನಗೆ ಅಚ್ಚುಮೆಚ್ಚಿನವರು. ಖಂಡಿತವಾಗಿ ಶೂಬರ್ಟ್ ಕೂಡ. ಬೇಟೋವನ್ ಇವರಿಗಿಂತ ಎಷ್ಟೋ ಕಡಿಮೆ.

೨ ಬಾಕ್ ಅಥವಾ ಮೊಜಾರ್ಟ್ ಇವರಿಬ್ಬರ ಪೈಕಿ ಯಾರು ನನಗೆ ಹೆಚ್ಚು ಅರ್ಥವೀಯುತ್ತಾರೆಂದು ಹೇಳುವುದು ಅಸಾಧ್ಯ. ಸಂಗೀತದಲ್ಲಿ ನಾನು ತರ್ಕವನ್ನು ನಿರೀಕ್ಷಿಸುವುದಿಲ್ಲ. ಒಟ್ಟಾರೆ ಹೇಳುವುದಾದರೆ ನಾನು ಅಂತರ್ಬೋಧಾತ್ಮಕವಾಗಿ ವರ್ತಿಸುತ್ತೇನೆ. ಸಿದ್ಧಾಂತಗಳು ನನಗೆ ತಿಳಿದಿಲ್ಲ. ಯಾವುದೇ ಕೃತಿಯ ಆಂತರಿಕ ಏಕತೆಯನ್ನು (ವಾಸ್ತುಶಿಲ್ಪ) ಅಂತರ್ಬೋಧಾತ್ಮಕವಾಗಿ ಗ್ರಹಿಸಲಾಗದಿದ್ದರೆ ಅದು ನನಗೆ ಪ್ರಿಯವಾಗದು.

೩ ಹ್ಯಾಂಡೆಲ್[60] ಯೋಗ್ಯ—ಪರಿಪೂರ್ಣ ಕೂಡ—ಎಂದು ಸದಾ ನನಗನ್ನಿಸಿದೆ. ಆದರೆ ಆವನಲ್ಲಿ ಒಂದು ಬಗೆಯ ಪೊಳ್ಳುತನವಿದೆ. ಬೇಟೋವನ್ ನನ್ನಮಟ್ಟಿಗೆ ತೀರ ನಾಟಕೀಯ ಮತ್ತು ವ್ಯಕ್ತಿಕೇಂದ್ರಿತ.

೪ ರಸಭಾವವನ್ನು ಅಭಿವ್ಯಕ್ತಿಸುವುದರಲ್ಲಿ ಅತ್ಯದ್ಭುತ ದಕ್ಷತೆ ಮತ್ತು ಮಾಧುರ್ಯವನ್ನು ಸಂಯೋಜಿಸುವುದರಲ್ಲಿ ಅಸಾಮಾನ್ಯ ಪ್ರತಿಭೆ ಇವುಗಳಿಂದಾಗಿ ಶೂಬರ್ಟ್ ನನ್ನ ಅಚ್ಚುಮೆಚ್ಚಿನವರ ಪೈಕಿ ಒಬ್ಬ. ಆದರೆ ಅವನ ಬೃಹತ್ಕೃತಿಗಳಲ್ಲಿ ಕಂಡುಬರುವ ರಚನಾಚಾತುರ್ಯದ ಅಭಾವ ನನ್ನನ್ನು ಕಲಕುತ್ತದೆ.

೫ ಶೂಮನ್ನನ[61] ಕಿರಿಯ ಕೃತಿಗಳಲ್ಲಿ ಪ್ರದರ್ಶಿತವಾಗುವ ಸ್ವಂತಿಕೆ ಮತ್ತು ಭಾವ ಶ್ರೀಮಂತಿಕೆಗಳಿಂದ ಆತ ನನ್ನನ್ನು ಆಕರ್ಷಿಸಿದ್ದಾನೆ. ಆದರೆ

ರೂಪಾತ್ಮಕ ಪ್ರೌಢಿಮೆ ಆತನಲ್ಲಿ ಇಲ್ಲವಾದ್ದರಿಂದ ಸಂಗೀತವನ್ನು ನಾನು ಪೂರ್ತಿಯಾಗಿ ಅನುಭವಿಸಿ ಸುಖಿಸಲಾರೆ. ಮೆಂಡೆಲ್‌ಸ್ಸಾನ್‌ನಲ್ಲಿ[62] ಗಣನೀಯ ಸಾಮರ್ಥ್ಯವಿರುವುದನ್ನು ಗುರುತಿಸಿರುವೆನಾದರೂ ವ್ಯಾಖ್ಯಿಸಲಾಗದ ಗಾಂಭೀರ್ಯರಾಹಿತ್ಯದಿಂದಾಗಿ ಆತನ ಸಂಗೀತ ಅನೇಕ ಸಲ ಸಾರರಹಿತವೆನಿಸುತ್ತದೆ.

೬ ಬ್ರಾಮ್ಸ್‌ನ[63] ಕೆಲವು ಲೈಡರ್* ಮತ್ತು ಗೃಹಸಂಗೀತ ಕೃತಿಗಳು, ಅವುಗಳ ರಚನೆಯಲ್ಲಿ ಕೂಡ, ನಿಜಕ್ಕೂ ಗಮನಾರ್ಹವಾದವೆಂದು ಗುರುತಿಸಿದ್ದೇನೆ. ಆದರೆ ನನ್ನ ಮಟ್ಟಿಗೆ ಅವನ ಹೆಚ್ಚಿನ ಕೃತಿಗಳು ಆಂತರಿಕ ಪ್ರೇರಕತೆ ಇಲ್ಲದವು. ಅವನ್ನು ಬರೆಯುವ ಆವಶ್ಯಕತೆ ಏನಿತ್ತೆಂಬುದು ನನಗೆ ಅರ್ಥವಾಗುತ್ತಿಲ್ಲ.

೭ ವ್ಯಾಗ್ನರನ[64] ಉಪಜ್ಞಶೀಲತೆಯನ್ನು ಮೆಚ್ಚುತ್ತೇನೆ. ಆದರೆ ಅವನ ವಾಸ್ತುಶಿಲ್ಪಾತ್ಮಕ ರಚನೆಯ ಅಭಾವದಲ್ಲಿ ಅವನತಿಯನ್ನು ಕಾಣುತ್ತೇನೆ. ಇದೂ ಅಲ್ಲದೆ ಅವನ ಸಂಗೀತವ್ಯಕ್ತಿತ್ವ ವಿವರಣಾತೀತವೆನಿಸುವಷ್ಟು ಅಸಹ್ಯ. ಎಂದೇ ಅವನ ಅಧಿಕಾಂಶವನ್ನು ನಾನು ಜುಗುಪ್ಸೆಯಿಂದ ಕೇಳಬಲ್ಲೆ, ಅಷ್ಟೆ.

೮ [ರಿಚರ್ಡ್] ಸ್ಟ್ರಾಸ್ ಪ್ರತಿಭಾವಂತನೆಂದು ಅನ್ನಿಸುತ್ತದೆ. ಆದರೆ ಅವನಲ್ಲಿ ಆಂತರಿಕ ಋಜುತ್ವವಿಲ್ಲ. ಅಲ್ಲದೆ ಅವನ ಆಸಕ್ತಿ ಬಾಹ್ಯ ಪರಿಣಾಮಗಳತ್ತ. ಆಧುನಿಕ ಸಂಗೀತಕ್ಕೂ ನನಗೂ ಒಟ್ಟಾರೆ ಏನೂ ಸಂಬಂಧವಿಲ್ಲ ಎಂದು ಹೇಳಲಾರೆ. ಡೆಬ್ಯೂಸಿಯಲ್ಲಿ[65] ಸುಕುಮಾರ ವರ್ಣಮಯತೆ ಇದೆ ಎಂದು ಅನ್ನಿಸುತ್ತದೆ. ಆದರೆ ಅವನು ರಾಚನಿಕ ದಾರಿದ್ರ್ಯವನ್ನು ಪ್ರದರ್ಶಿಸುತ್ತಾನೆ. ಇಂಥ ಪರಿಯ ಬಗೆಗೆ ನಾನು ಅಧಿಕೋತ್ಸಾಹವನ್ನೇನೂ ತಳೆಯಲಾರೆ. ●

ಐನ್‌ಸ್ಟೈನರ ದಿನಗಳಂದು ಇದ್ದ ಆಧುನಿಕ ಕೃತಿಕಾರರ ರಚನೆಗಳು ಬಲು ಮಟ್ಟಿಗೆ, ನಾವು ಕಾಣುವಂತೆ, ಅವರಿಗೆ ತೀರ ಆಕರ್ಷಕವಾಗಿದ್ದುವು. ಹೀಗಿದ್ದರೂ ಐನ್‌ಸ್ಟೈನರಿಗೆ ಅರ್ನೆಸ್ಟ್ ಬ್ಲಾಕ್[66] ಬಗ್ಗೆ ಉನ್ನತಮಟ್ಟದ ವೈಯಕ್ತಿಕ ಗೌರವವಿತ್ತು. ೧೯೩೦ ನವೆಂಬರ್ ೧೫ರಂದು, ಪ್ರಾಯಶಃ

* ೧೯ನೆಯ ಶತಮಾನದ ಜರ್ಮನಿಯಲ್ಲಿ ಬಳಕೆಯಲ್ಲಿದ್ದ ಲಾವಣಿ ಮಾದರಿ ರಚನೆ—ಕನ್ನಡಾನುವಾದಕ

ಒಂದು ಬೇಡಿಕೆಗೆ ಉತ್ತರವಾಗಿ, ಅವರು ಈ ಮುಂದಿನಂತೆ ಇಂಗ್ಲಿಷಿನಲ್ಲಿ ಬರೆದರು :

● ಆಧುನಿಕ ಸಂಗೀತವನ್ನು ಕುರಿತ ನನ್ನ ಜ್ಞಾನ ಅತಿ ಸೀಮಿತ. ಆದರೆ ಒಂದು ವಿಚಾರದಲ್ಲಿ ನನಗೆ ದೃಢ ನಂಬಿಕೆ ಉಂಟು. ನಿಜವಾದ ಕಲೆ ಎಂಬುದು ಸೃಷ್ಟಿಶೀಲ ಕಲಾವಿದನ ಒಳಗೆ ಬುದ್ಬುದಿಸುವ ನಿರೋಧಿಸಲಾಗದ ಪ್ರೇರಣೆಯಿಂದ ಲಕ್ಷಣಿತವಾಗಿರುತ್ತದೆ. ಈ ದಿನಗಳಲ್ಲಿ ಕೇವಲ ಕೆಲವೇ ಸಂಗೀತಗಾರರಲ್ಲಿ ಕಂಡುಬರುವ ಈ ಪ್ರೇರಣೆಯನ್ನು ನಾನು ಅರ್ನೆಸ್ಟ್ ಬ್ಲಾಕ್ ಅವರಲ್ಲಿ ಗುರುತಿಸಬಲ್ಲೆ. ●

ಸುಪ್ರಸಿದ್ಧ ಮೇಳನಿಯಂತ್ರಕ ಆರ್ಟುರೊ ಟಾಸ್ಕನೀನಿಯವರಿಗೆ ೧೯೩೮ ಜನವರಿಯಲ್ಲಿ ಅಮೆರಿಕನ್ ಹೀಬ್ರೂ ಪದಕವನ್ನು ಪ್ರದಾನಿಸಿದಾಗ ಐನ್‌ಸ್ಟೈನ್ ಈ ಮುಂದಿನ ಮಾತುಗಳನ್ನು ಬರೆದರು. ಪ್ರದಾನ ಸಮಾರಂಭದಲ್ಲಿ ಇವನ್ನು ಸಾರ್ವಜನಿಕವಾಗಿ ಓದಿರಬಹುದು :

● ಧ್ಯೇಯಸಾಧನೆಗೆ ತನ್ನನ್ನು ತಾನು ತ್ರಿಕರಣಪೂರ್ವಕವಾಗಿ ನಿವೇದಿಸಿಕೊಂಡವ ಮಾತ್ರ ನಿಜವಾದ ನಾಯಕನಾಗಬಲ್ಲ. ಎಂದೇ ನಾಯಕತ್ವ ವ್ಯಕ್ತಿಯ ಸರ್ವಸ್ವವನ್ನೂ ಬೇಡುತ್ತದೆ. ಟಾಸ್ಕನೀನೀ ತಮ್ಮ ಜೀವನದ ಒಂದೊಂದು ಅಭಿವ್ಯಕ್ತಿಯಲ್ಲಿಯೂ ಇದನ್ನು ಪ್ರದರ್ಶಿಸಿದ್ದಾರೆ. ●

ಬರ್ಲಿನ್ನಿನಲ್ಲಿದ್ದ ಒಬ್ಬ ಪತ್ರಕರ್ತ ಅಕ್ಟೋಬರ್ ೧೯೨೮ರಲ್ಲಿ ಕಾಗದ ಬರೆದು ಹಲವು ಪ್ರಶ್ನೆಗಳನ್ನು ಎತ್ತಿದ. ಆ ಪೈಕಿ ಒಂದು ಇದು : ಇವರ ಸಂಗೀತ ಚಟುವಟಿಕೆ, ಇದರಿಂದ ಪೂರ್ತಿಯಾಗಿ ಬೇರೆಯೇ ಆದ, ಇವರ ಪ್ರಧಾನ ಕಾರ್ಯಕ್ಷೇತ್ರದ ಮೇಲೆ ಏನಾದರೂ ಪ್ರಭಾವ ಬೀರಿತ್ತೇ ? ೧೯೨೮ ಅಕ್ಟೋಬರ್ ೨೩ರಂದು ಐನ್‌ಸ್ಟೈನ್ ಮಾರೋಲೆ ಬರೆದರು :

● ಸಂಗೀತ ಸಂಶೋಧನಕಾರ್ಯವನ್ನು **ಪ್ರಭಾವಿಸದು.** ಆದರೆ ಎರಡೂ ಪೋಷಿತವಾಗುವುದು ಹಂಬಲಿಕೆಯ ಅದೇ ಸೆಲೆಯಿಂದ. ಇವು ಒದಗಿಸುವ ವಿಮೋಚನಸುಖದ ಕಾರಣವಾಗಿ ಒಂದು ಇನ್ನೊಂದಕ್ಕೆ ಪೂರಕವಾಗಿದೆ. ●

ಐನ್‌ಸ್ಟೈನರ ಸ್ನೇಹಿತರಾದ ಡಾ. ಆಟ್ಟೋ ಜೂಲಿಯಸ್‌ಬರ್ಗರ್ ವೃತ್ತಿಯಿಂದ ಮನೋರೋಗ ಚಿಕಿತ್ಸಕ. ಇವರು ಬರ್ಲಿನ್ನಿನಲ್ಲಿ ವೃತ್ತಿನಿರತರಾಗಿದ್ದರು. ಸ್ಪಿನೋಝಾ[41] ಮತ್ತು ಶೋಪೆನ್‌ಹಾರ್[67] ಕುರಿತಂತೆ ಇವರನ್ನೊಬ್ಬ ಪರಿಣತರೆಂದು ಪರಿಗಣಿಸಲಾಗಿತ್ತು. ಯೆಹೂದ್ಯರಾಗಿದ್ದ ಇವರಿಗೆ ಸುತ್ತಲೂ ಉಲ್ಬಣಿಸುತ್ತಿದ್ದ ಅಪಾಯದ ಪರಿವೆ ಇತ್ತು. ೧೯೩೭ರಲ್ಲಿ ಇವರು ತಮ್ಮ ಇಬ್ಬರು ಮಕ್ಕಳನ್ನು, ಪ್ರತಿಸಲವೂ ಒಂದು ಮಗುವಿನಂತೆ, ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ ಕಳಿಸಲು ಶಕ್ತರಾದರು. ಹೆಚ್ಚುಕಡಿಮೆ ಕೊನೆಯ ಗಳಿಗೆಯಲ್ಲಿ—ಅಮಾನುಷ ಅನಿಲಕೋಷ್ಠಗಳ ಆಗಮನಪೂರ್ವ—ತಂದೆತಾಯಿ ಕೂಡ ತಮ್ಮ ಮಕ್ಕಳನ್ನು ಹಿಂಬಾಲಿಸುವುದರಲ್ಲಿ ಯಶಸ್ವಿಗಳಾದರು. ವಿವಿಧ ವಿಷಯಗಳ ಮೇಲೆ ಐನ್‌ಸ್ಟೈನ್ ಜೂಲಿಯಸ್‌ಬರ್ಗರರಿಗೆ ಬರೆದ ಕಾಗದಗಳಿಂದ ಮತ್ತು ಜೂಲಿಯಸ್‌ಬರ್ಗರ್ ಐನ್‌ಸ್ಟೈನರಿಗೆ ಬರೆದ ಒಂದು ಕಾಗದದಿಂದ ಉದ್ಧರಿಸಿದ ಅಂಶಗಳನ್ನು ಮುಂದೆ ಕೊಟ್ಟಿದೆ.

೧೯೩೭ ಸೆಪ್ಟೆಂಬರ್ ಎರಡು ಐನ್‌ಸ್ಟೈನ್ ಪ್ರಿನ್ಸ್‌ಟನ್ನಿನಿಂದ, ಆಗ ಇನ್ನೂ ಬರ್ಲಿನ್ನಿನಲ್ಲಿದ್ದ ಜೂಲಿಯಸ್‌ಬರ್ಗರರಿಗೆ ಪತ್ರ ಬರೆದು ಇವರ ಮಗ ಆ ವೇಳೆಗಾಗಲೇ ಅಮೆರಿಕ ಸಂಯುಕ್ತ ಸಂಸ್ಥಾನಗಳನ್ನು ತಲಪಿದುದಕ್ಕೆ ತಮ್ಮ ಸಂತೋಷ ವ್ಯಕ್ತಪಡಿಸಿದರು; ಮತ್ತು ಇವರ ಮಗಳಿಗೆ ಪ್ರವೇಶ ದೊರೆಯುವ ಸಾಧ್ಯತೆಯ ಬಗ್ಗೆ ಉತ್ತೇಜಕ ಮಾತುಗಳನ್ನು ಕೇಳಿರುವುದಾಗಿ ತಿಳಿಸಿದರು. ಇತರ ವಿಷಯಗಳನ್ನು ಕುರಿತು ಪ್ರಸ್ತಾವಿಸಿದ ತರುವಾಯ ತಮ್ಮ ಪ್ರಸಕ್ತ ಸಂಶೋಧನ ಪ್ರಯತ್ನಗಳನ್ನು ಉಲ್ಲೇಖಿಸುತ್ತ ಕಾಗದವನ್ನು ಮುಕ್ತಾಯಗೊಳಿಸಿದರು. ಈ ಪ್ರಯತ್ನಗಳು ಗುರುತ್ವವನ್ನೂ ವಿದ್ಯುತ್ಕಾಂತತ್ವವನ್ನೂ ಕೊಂಡಿಸಬಲ್ಲ ಏಕೀಕೃತ ಸಿದ್ಧಾಂತದ[52] ಸುದೀರ್ಘ ಶೋಧವನ್ನು ಕುರಿತವಾಗಿದ್ದುವು. ಕಾಗದದ ಪರಿಚ್ಛೇದಗಳನ್ನು ಇಲ್ಲಿ ಕೊಟ್ಟಿದೆ:

● ಹತ್ತು ವರ್ಷಗಳ ಹಿಂದಿನಂತೆ ಈಗಲೂ ನಾನು ಅವೇ ಸಮಸ್ಯೆಗಳೊಂದಿಗೆ ಹೋರಾಡುತ್ತಿದ್ದೇನೆ. ಪುಟ್ಟ ಸಂಗತಿಗಳಲ್ಲಿ ನಾನು ಗೆಲ್ಲುತ್ತೇನೆ. ಆದರೆ ನಿಜವಾದ ಗುರಿ, ಕೆಲವೊಮ್ಮೆ ಕೈಗೆಟುಕುವಷ್ಟು ಹತ್ತಿರ ಬಂದರೂ, ಅಪ್ರಾಪ್ಯವಾಗಿಯೇ ಉಳಿದಿದೆ. ಇದು ಕಠಿಣವಾದರೂ ಪ್ರತಿಫಲದಾಯಕ. ಕಠಿಣವೇಕೆಂದರೆ ಗುರಿ ನನ್ನ ಅಳವಿಗೆ ಮೀರಿದುದಾಗಿದೆ. ಪ್ರತಿಫಲದಾಯಕ

ಏಕೆಂದರೆ ದೈನಂದಿನ ಜೀವನದ ದಂದುಗಗಳ ಎದುರು ಇದು ಒಬ್ಬಾತನನ್ನು ಅಬಾಧಿತನನ್ನಾಗಿಸುತ್ತದೆ.

ಇಲ್ಲಿಯ ಜನರ ಮತ್ತು ಅವರ ಬದುಕಿನ ರೀತಿಯ ಜೊತೆ ಹೊಂದಿಕೊಳ್ಳುವುದು ನನಗೆಂದೂ ಸಾಧ್ಯವಾಗದು. ಇಲ್ಲಿ ಬಂದಾಗಲೇ ನಾನು ಇಂಥ ಹೊಂದಾಣಿಕೆ ಏರ್ಪಡದಷ್ಟು ಹಿರಿಯವಯಸ್ಸಿನವನಾಗಿದ್ದೆ. ನಿಜ ಹೇಳುವುದಾದರೆ ಬರ್ಲಿನ್ನಿನಲ್ಲಾಗಲಿ ತತ್ಪೂರ್ವ ಸ್ವಿಟ್ಸರ್ಲೆಂಡಿನಲ್ಲಾಗಲಿ ಪರಿಸ್ಥಿತಿ ಇದಕ್ಕಿಂತ ವಿಭಿನ್ನವಾದುದೇನೂ ಆಗಿರಲಿಲ್ಲ. ಸ್ವತಃ ಒಂಟಿಗ ಆಗಿರುವ ನಿಮಗೇ ತಿಳಿದಿರುವಂತೆ ಒಬ್ಬಾತ ಹುಟ್ಟಾ ಒಂಟಿಗನೇ ಆಗಿರುತ್ತಾನೆ. ●

೧೯೪೪ರ ಆಗಸ್ಟ್ ೨ರಂದು ಐನ್‌ಸ್ಟೈನ್ ಜೂಲಿಯಸ್‌ಬರ್ಗರರಿಗೆ ಬರೆದ ಕಾಗದವಿದು. ಈ ವೇಳೆಗೆ ಜೂಲಿಯಸ್‌ಬರ್ಗರ್ ಕುಟುಂಬ ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ಸುರಕ್ಷಿತವಾಗಿ ನೆಲೆಗೊಂಡಾಗಿತ್ತು :

● ಈ ಎಲ್ಲ ವರ್ಷಗಳ ತರುವಾಯ ನಿಮಗಿಲ್ಲಿ ಶುಭಸಂದೇಶ ಕಳಿಸಲು ಸಾಧ್ಯವಾಗಿರುವುದು ನನ್ನ ಭಾಗ್ಯವೆಂದು ಭಾವಿಸುತ್ತೇನೆ. ನನ್ನ ಮೇಲೆ ನಾನು ಒತ್ತಾಯದ ಮೌನವೇಷ್ಟನವನ್ನು ಎಳೆದುಕೊಂಡಿದ್ದೆ. ಏಕೆಂದರೆ ಬರ್ಬರ ನಾಡಿನಲ್ಲಿದ್ದ ಒಬ್ಬ ವ್ಯಕ್ತಿಗೆ ನಾನು ಕಳಿಸಿದ ಯಾವುದೇ ಚೀಟಿ ಆತನನ್ನು ಅಪಾಯಕ್ಕೆ ಒಡ್ಡದೆ ಇರುತ್ತಿರಲಿಲ್ಲ. ಜನ ತಮ್ಮ ಸಂಕಟದ ನಡುವೆ ರುದ್ರಾಂತವನ್ನೈದುವುದು ಸಾಧ್ಯವಾಗದು, ಬದಲು, ರುದ್ರಹರ್ಷದಲ್ಲಿ ಸಿಕ್ಕಿಹಾಕಿಕೊಂಡಿರುವಂತೆ ಕೆಡೆಯಲ್ಪಟ್ಟಿರುತ್ತಾರೆ ಎಂಬುದಾಗಿ ನಿಮ್ಮ ಒಲವಿನ ಶೋಪೆನ್‌ಹೌರ್ ಒಮ್ಮೆ ಹೇಳಿದ್ದರು. ಎಷ್ಟು ನಿಜವಾದ ಮಾತು ಮತ್ತು ಅದೆಷ್ಟು ಬಾರಿ ನನಗೂ ಈ ಭಾವ ಮೂಡಿಲ್ಲ! ನಿನ್ನೆ ದೈವತ್ವಕ್ಕೆ ಉತ್ಥಾನ, ಇಂದು ಹಗೆತನಕ್ಕೂ ಉಗುಳಿಕೆಗೂ ಈಡು, ನಾಳೆ ಮರೆವು ಮತ್ತು ನಾಡಿದ್ದು ಸಂತ ಪದವಿಗೆ ಬಡ್ತಿ. ಸುಹಾಸ ಪ್ರಜ್ಞೆಯೊಂದೇ ವಿಮೋಚನೆಯ ಮಾರ್ಗ. ನಮ್ಮ ಕೊನೆ ಉಸಿರಿರುವ ತನಕವೂ ನಾವದನ್ನು ಉಳಿಸಿಕೊಂಡಿರೋಣ. ●

೧೯೪೭ ಸೆಪ್ಟೆಂಬರ್ ೩೦ರಂದು ಐನ್‌ಸ್ಟೈನ್ ಜೂಲಿಯಸ್‌ಬರ್ಗರರಿಗೆ ಈ ಮುಂದಿನಂತೆ ಬರೆದರು. ಮೊದಲ ಪರಿಚ್ಛೇದದಲ್ಲಿ ಉಲ್ಲೇಖಿತವಾಗಿರುವ ಶುಭಾಶಯಗಳು ಪ್ರಾಯಶಃ ಯೆಹೂದ್ಯ ನೂತನ ವರ್ಷಕ್ಕೆ ಸಂಬಂಧಿಸಿದವು :

● ನಿಮ್ಮ ಒಲುಮೆಯ ನುಡಿಗಳಿಗೆ ಮಾರುಹೋಗಿದ್ದೇನೆ. ತಡವಾಗಿಯಾದರೂ ನಿಮಗೆ ಶುಭಾಶಯಗಳನ್ನು ಕಳುಹಿಸುತ್ತಿದ್ದೇನೆ. ಅಷ್ಟೊಂದು

 

ಪ್ರಶಂಸೆಗೆ ಖಂಡಿತ ನಾನು ಅರ್ಹನಲ್ಲವೆಂಬುದು ನನಗೆ ಚೆನ್ನಾಗಿ ಗೊತ್ತಿದೆ ; ಆದರೆ ನಿಮ್ಮ ಮಾತುಗಳಲ್ಲಿ ಬೆಳಗುವ ಸೌಹಾರ್ದಭಾವವನ್ನು ಸಂತೋಷ ದಿಂದ ಗ್ರಹಿಸಿದ್ದೇನೆ.

ಮಾತಿಗೆ ನಿಲುಕದ ಪಾತಕಕ್ಕೆ ಸ್ವಲ್ಪಮಟ್ಟಿಗಾದರೂ ಪ್ರಾಯಶ್ಚಿತ್ತ ಒದಗುವ ದಿನ ದೂರವಾಗಿಲ್ಲವೆಂದು ಈಗಾದರೂ ಕನಿಷ್ಠ ಪಕ್ಷ ಆಶಿಸಬಹು ದೆಂದು ನಂಬಿದ್ದೇನೆ, ಆದರೆ ಆ ಎಲ್ಲ ಕ್ಲೇಶ,ಆ ಎಲ್ಲ ಉಚ್ಛೃಂಖಲತೆ, ಆ ಎಲ್ಲ ಅರ್ಥಹೀನ ಮಾನವಹತ್ಯೆ ಇವನ್ನು ಯಾವುದೂ ಪರಿಹರಿಸದು. ಹೀಗಿದ್ದರೂ ಸುಳ್ಳುಗಳ ಕಂತೆ ಮತ್ತು ದುಷ್ಟಪ್ರಭುತ್ವ ಸುದೀರ್ಘಕಾಲಾವಧಿಯಲ್ಲಿ ಜಯಗಳಿಸಲಾರವೆಂಬ ಸಂಗತಿ ಅತ್ಯಂತ ಮತಿಹೀನ ಪ್ರಾಣಿಗೆ ಕೂಡ ಇಂದು ತಿಳಿಯುವಂತೆ ಮಾಡಬಹುದೆಂದು ಆಶಿಸಬಹುದಾಗಿದೆ.

ಸತ್ಯಾನ್ವೇಷಣೆ ಎಂಥ ಅಚಲ ಸ್ಥೈರ್ಯವನ್ನು ಪ್ರದಾನಿಸಬಲ್ಲದೆಂಬ ಸಂಗತಿಯನ್ನು ಒಬ್ಬಾತ ನಿಮ್ಮಲ್ಲಿ ಕಾಣುತ್ತಾನೆ. ನಾನಾದರೂ ನನ್ನ ಎಲ್ಲ ನಿಜಸಂತೃಪ್ತಿಗಳನ್ನೂ ಇಂಥ ಒಂದು ನಿಲವಿನಿಂದ ಗಳಿಸಿರುವುದಾಗಿದೆ. ಈ ಬಗೆಯ ಜನರ ಕಾಲರಹಿತ ಸಮುದಾಯದಲ್ಲಿ ಒಬ್ಬಾತ ಭಗ್ನಮನೋರಥತ್ವ ವನ್ನೂ ಆಶಾರಹಿತ ಏಕಾಂತತ್ವದ ಭಾವಗಳನ್ನೂ ನಿವಾರಿಸಬಲ್ಲ ಒಂದು ತೆರನಾದ ಆಸರೆ ಪಡೆಯುತ್ತಾನೆ. ●

ಜೂಲಿಯಸ್‌ಬರ್ಗರ್ ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ಸೆಪ್ಟೆಂಬರ್ ೧೯೪೨ರಲ್ಲಿ ಬರೆದ ಒಂದು ಕಾಗದದಲ್ಲಿ ಸುಮಾರು ಹದಿನೈದು ಸಂವತ್ಸರಗಳ ಹಿಂದೆ ಐನ್‌ಸ್ಟೈನರ ಅತ್ತೆಯವರಿಗೆ ನೀಡಿದ್ದ ಶ್ಮಶಾನಸಂಸ್ಕಾರ ಕುರಿತು ಪ್ರಸ್ತಾವಿಸಿದ್ದರು. ಸಂಸ್ಕಾರಾನಂತರ ಅವರೆಲ್ಲರೂ ಗೋರಿಯಿಂದ ಹಿಂತಿರುಗು ತ್ತಿದ್ದಾಗ ಐನ್‌ಸ್ಟೈನ್ ತಮಗೇನು ಹೇಳಿದ್ದರೆಂಬುದನ್ನು ಜೂಲಿಯಸ್ ಬರ್ಗರ್ ಈ ಕಾಗದದಲ್ಲಿ ನೆನಪಿಸಿಕೊಂಡಿದ್ದರು :

● ಆ ಬಂಧುರ ಪ್ರಾರ್ಥನೆಯ ಅಂತಿಮ ಪದಗಳು "ಪ್ರಭು ಕೊಟ್ಟ, ಮತ್ತು ಪ್ರಭು ಒಯ್ದ ; ಪ್ರಭುವಿನ ನಾಮ ಧನ್ಯ," ಬದುಕಿನ ಸಮೃದ್ಧಿ ಯನ್ನು ಸೂಚಿಸುತ್ತವೆ : ಅದು ಸದಾ ಕೊಡುತ್ತಿದೆ ಮತ್ತು ಸದಾ ಹಿಂದೆ ತೆಗೆದುಕೊಳ್ಳುತ್ತದೆ— ಮಗುದೊಮ್ಮೆ ಕೊಡಲೆಂದು.[63] ●

೧೯೪೬ ಏಪ್ರಿಲ್ ೧೧ರಂದು ಐನ್‌ಸ್ಟೈನ್ ಜೂಲಿಯಸ್‌ಬರ್ಗರರಿಗೆ ಹೀಗೆ ಬರೆದರು :

● ಹಿಟ್ಲರನ ಹೊಣೆಗಾರಿಕೆ ಬಗ್ಗೆ ನೀವೊಂದು ನಿರ್ದಿಷ್ಟ ನಿಲವು ತಳೆ

ದಿದ್ದೀರಿ. ವಕೀಲರು ವೈದ್ಯರ ಮೇಲೆ ಆರೋಪಿಸುವ ಸೂಕ್ಷ್ಮತರ ವ್ಯತ್ಯಾಸಗಳನ್ನು ನಿಜಕ್ಕೂ ನಾನೆಂದೂ ನಂಬಲಿಲ್ಲ. ಜ್ಞೇಯನಿಷ್ಠವಾಗಿ ಹೇಳುವುದಾದರೆ ಹೇಗೂ ಮುಕ್ತಮನಸ್ಸೆಂಬುದು ಇಲ್ಲವಷ್ಟೆ. ಇತರರಿಗೆ ವಿಪತ್ಕಾರಕರಾಗಿರುವವರ ಕುಕೃತ್ಯಗಳ ಪ್ರೇರಕಬಲ ಏನೇ ಇರಲಿ, ಅವರಿಗೆದುರಾಗಿ ನಾವು ನಮ್ಮನ್ನು ರಕ್ಷಿಸಿಕೊಳ್ಳುವುದು ಅಗತ್ಯವೆಂದು ಭಾವಿಸುತ್ತೇನೆ. ಹೊಣೆಗಾರಿಕೆಯನ್ನು ನಿರ್ಣಯಿಸಬಲ್ಲ ನಿಕಷದ ಅಗತ್ಯವಾದರೂ ಏನಿದೆ ? ಜನರ ನೈತಿಕ ವರ್ತನೆಯಲ್ಲಿ ಇಂದು ಕಾಣಬರುತ್ತಿರುವ ಭೀಕರ ಅವನತಿ ಉದ್ಭವಿಸಿರುವುದು, ಪ್ರಧಾನವಾಗಿ, ನಮ್ಮ ಬದುಕಿನ ಯಾಂತ್ರೀಕರಣ ಮತ್ತು ಅಮಾನುಷೀಕರಣಗಳಿಂದ ಎಂದು ಭಾವಿಸಿದ್ದೇನೆ—ವೈಜ್ಞಾನಿಕ ಮತ್ತು ತಾಂತ್ರಿಕ ಮನೋಧರ್ಮ ಅಭಿವರ್ಧಿಸಿದುದರ ಪರಿಣಾಮವಾದ ಪ್ರಳಯಾಂತಕ ಉಪ್ರೋತ್ಪನ್ನವಿದು. ಸ್ವಯಂಕೃತಾಪರಾಧ !* ಈ ಸರ್ವನಾಶಾತ್ಮಕ ಕೊರತೆಯನ್ನು ಎದುರಿಸಲು ನನಗೇನೂ ಹಾದಿ ಹೊಳೆಯುತ್ತಿಲ್ಲ. ಮಾನವ ತಾನು ವಾಸಿಸುತ್ತಿರುವ ಗ್ರಹಕ್ಕಿಂತಲೂ ಶೀಘ್ರತರವಾಗಿ ತಣ್ಣಗಾಗುತ್ತಿದ್ದಾನೆ. ●

ಪುನಃ ೧೯೫೭ ಸೆಪ್ಟೆಂಬರ್ ೨೯ರಂದು ಐನ್‌ಸ್ಟೈನ್ ಜೂಲಿಯಸ್ ಬರ್ಗರರಿಗೆ ಬರೆದರು :

● ಈ ದಿನಗಳಂದು ನೀವು ನಿಮ್ಮ ಎಂಬತ್ತನೆಯ ಹುಟ್ಟುಹಬ್ಬವನ್ನು ಆಚರಿಸುತ್ತಿರುವಿರೆಂಬುದಾಗಿ ಹಲವಾರು ಸ್ನೇಹಿತರಿಂದ ಕೇಳಿದ್ದೇನೆ— ಇದು ಸಾಧ್ಯವೇ ! ನಾನಂತೂ ನಂಬಲಾರೆ. ಏಕೆಂದರೆ ನಿಮ್ಮ ಮತ್ತು ನನ್ನ ತೆರನಾದ ಜನ ಮರ್ತ್ಯರಾಗಿರುವುದು ನಿಜವಾದರೂ ನಾವೆಷ್ಟೇ ವರ್ಷ ಬದುಕಿದರೂ ಮುದುಕರಾಗುವುದಂತೂ ಇಲ್ಲ. ನನ್ನ ಅರ್ಥವಿದು : ನಾವು ಯಾವುದರಿಂದ ಜನಿಸಿದೆವೊ ಆ ಪರಮಾದ್ಭುತ ವಸ್ತುವಿನೆದುರು ಮೂಕ ವಿಸ್ಮಿತ ಪ್ರೇಕ್ಷಕರಾಗಿ ನಿಲ್ಲದಿರುವುದು ನಮಗೆಂದೂ ಸಾಧ್ಯವಾಗದು. ಮಾನವವಲಯದಲ್ಲಿ ಅತೃಪ್ತಿಕರವಾದ ಸಮಸ್ತ ವಿಚಾರಗಳಿಗೂ ನಮಗೂ ನಡುವೆ ಈ ಭಾವ ಸಾಕಷ್ಟು ಅಂತರವನ್ನು ಕಲ್ಪಿಸುತ್ತದೆ—ಇದೇನೂ ಅಲ್ಪ ವಿಷಯವಲ್ಲ. ಮುಂಜಾನೆ ವೇಳೆ *New York Times* ಬಿತ್ತರಿಸುವ ಸುದ್ದಿ ಸಮಾಚಾರ ನನ್ನಲ್ಲಿ ವಮನಭಾವವನ್ನು ಉಕ್ಕಿಸುವಾಗ ಇವು ಹೇಗೂ

* ಲ್ಯಾಟಿನ್ ಪದ **Nostra Culpa**—ಕನ್ನಡಾನುವಾದಕ

ನಾವು ಕಡುಕಷ್ಟದಿಂದ ಮಾತ್ರ ಕೊನೆಗಾಣಿಸಿದ ಹಿಟ್ಲರ್ ಶಾಹಿಗಿಂತ ಉತ್ತಮ ಎಂಬುದಾಗಿ ಮರುಯೋಚಿಸುತ್ತೇನೆ. ●

೧೯೪೭ ಸೆಪ್ಟೆಂಬರ್ ೨೯ರಂದು ಐನ್‌ಸ್ಟೈನ್ ಜೂಲಿಯಸ್‌ಬರ್ಗರರಿಗೆ ಬರೆದ ಈ ಮೇಲಿನ ಕಾಗದ ಇದಕ್ಕಿಂತ ಸಾಕಷ್ಟು ಹಿಂದಿನ ಒಂದು ಬಾಬನ್ನು ನೆನಪಿಗೆ ತರುತ್ತದೆ. ಪ್ರೊಫೆಸರ್ ಫೆಡರಿಗೊ ಎನ್ರಿಕ್ಸ್ ಎಂಬವರು ಬೊಲೊನಾದಲ್ಲಿ ಏರ್ಪಡಿಸಿದ್ದ ಒಂದು ವೈಜ್ಞಾನಿಕ ಸಮ್ಮೇಳನದಲ್ಲಿ ಐನ್‌ಸ್ಟೈನ್ ಭಾಗವಹಿಸಿದ್ದರು. ಅಲ್ಲಿ ಇವರಿಗೆ ಪ್ರೊಫೆಸರರ ಮಗಳು ಆ್ಯಡ್ರಿಯಾನಾಳ ಭೇಟಿ ಆಗಿತ್ತು. ತಮ್ಮ ರುಜುವಿರುವ ಒಂದು ಟಿಪ್ಪಣಿ ಬೇಕೆಂದು ಆಕೆ ಇವರನ್ನು ಕೇಳಿರಬಹುದು. ಇದು ಹೇಗೂ ಇರಲಿ. ಐನ್‌ಸ್ಟೈನ್ ಈ ಮುಂದಿನ ಹಸ್ತಲಿಖಿತ ಸಂದೇಶ ಬರೆದು ರುಜುವಿಕ್ಕಿ ಆಕೆಗೆ ಅಕ್ಟೋಬರ್ ೧೯೨೧ರಲ್ಲಿ ರವಾನಿಸಿದರು :

● ಜೀವಮಾನ ಪೂರ್ತಿ ಶಿಶುಗಳಾಗಿಯೇ ಉಳಿದಿರಲು ನಮಗೆ ಅವಕಾಶ ಒದಗುವ ಕ್ರಿಯಾಕ್ಷೇತ್ರವೆಂದರೆ ವ್ಯಾಸಂಗ, ಮತ್ತು ಸಾರ್ವತ್ರಿಕವಾಗಿ, ಋತದ ಹಾಗೂ ಸೌಂದರ್ಯದ ಅನ್ವೇಷಣೆ.

ಆ್ಯಡ್ರಿಯಾನಾ ಎನ್ರಿಕ್ಸ್‌ಳಿಗೆ, ಅಕ್ಟೋಬರ್ ೧೯೨೧ರಲ್ಲಿ ಒದಗಿದ ನಮ್ಮ ಪರಿಚಯದ ಕುರುಹಾಗಿ. ●

ಜೂಲಿಯಸ್‌ಬರ್ಗರರಿಗೆ ೧೯೫೪ ಏಪ್ರಿಲ್ ೧೧ರಂದು ಐನ್‌ಸ್ಟೈನ್ ಬರೆದ ಕಾಗದ ಈ ಮುಂದಿನ ಎರಡು ಕಾಗದಗಳ ಪೈಕಿ ಎರಡನೆಯದರೊಡನೆ ಹೊಂದಿಕೊಳ್ಳುತ್ತದೆ. ಇದು ಮರಣದಂಡನೆಯನ್ನು ಕುರಿತದ್ದು.

ತತ್ಪೂರ್ವ ೧೯೨೭ ನವೆಂಬರ್ ೩ರಂದು ಐನ್‌ಸ್ಟೈನ್ ಇದೇ ವಿಷಯದ ಮೇಲೆ ಬರ್ಲಿನ್ನಿನ ಒಬ್ಬ ಪ್ರಕಾಶಕನಿಗೆ ಬರೆದ ಒಂದು ಕಾಗದದಲ್ಲಿ ಹೀಗೆ ಹೇಳಿದ್ದಾರೆ:

● ಮರಣದಂಡನೆಯ ರದ್ದತಿ ಅಪೇಕ್ಷಣೀಯವೆಂಬ ದೃಢನಿರ್ಣಯಕ್ಕೆ ಬಂದಿದ್ದೇನೆ:

ಕಾರಣಗಳು :

೧ ನ್ಯಾಯ ವಿತರಣೆಯಲ್ಲಿ ದೋಷ ನುಸುಳಿದ್ದಾದರೆ ಅದನ್ನು ಸರಿಪಡಿಸಲಾಗದಿರುವಿಕೆ.

೨ ಪಾಶಿಯ ಕ್ರಮಗಳನ್ನು ಪ್ರತ್ಯಕ್ಷವಾಗಿ ಜಾರಿಗೆ ತರಬೇಕಾದವರ ಮೇಲಾಗುವ ಹಾನಿಕಾರಕ ನೈತಿಕ ಪ್ರಭಾವ. ●

ಇದೇ ವಿಷಯಕ್ಕೆ ಐನ್‌ಸ್ಟೈನ್ ಮತ್ತೆ ಮರಳಿದರು. ಮಾನಸಿಕವಾಗಿ ತುಂಬ ಕ್ಷೋಭೆಗೊಂಡಿದ್ದ ಒಬ್ಬ ಪ್ರಾಗ್ ತರುಣನಿಗೆ ೧೯೩೧ ನವೆಂಬರ್ ೪ರಂದು ಅವರು ಬರೆದ ಜವಾಬಿನಿಂದ ಆಯ್ದ ಅಂಶ :

● ಯುದ್ಧ ಮತ್ತು ಮರಣದಂಡನೆ ಬಗ್ಗೆ ನಾನೇನು ಯೋಚಿಸುವೆ ಎಂಬುದಾಗಿ ನೀವು ಪ್ರಶ್ನಿಸಿದ್ದೀರಿ. ಈ ಎರಡನೆಯ ಪ್ರಶ್ನೆ ಸರಳತರವಾದದ್ದು. ನಾನೆಂದೂ ಶಿಕ್ಷಾಪರನಲ್ಲ, ಬದಲು, ಸಮಾಜಕ್ಕೆ ಉಪಯುಕ್ತವಾಗುವ ಮತ್ತು ಅದರ ರಕ್ಷಣೆಗೆ ಕಾರಣವಾಗುವ ಕಾಯ್ದೆಗಳ ಪರ ಮಾತ್ರ. ಈ ಅರ್ಥದಲ್ಲಿ, ಶುದ್ಧ ನಿರುಪಯುಕ್ತ ಅಥವಾ ಅಪಾಯಕಾರಿ ವ್ಯಕ್ತಿಗಳ ಹತ್ಯೆಯನ್ನು, ತತ್ತ್ವಶಃ, ನಾನು ವಿರೋಧಿಸಲಾರೆ. ಆದರೂ ನಾನು ಈ ಕೃತ್ಯವನ್ನು ಬೆಂಬಲಿಸುವುದಿಲ್ಲ: ನಾನು ಜನರನ್ನು—ಅಂದರೆ ನ್ಯಾಯಾಲಯಗಳನ್ನು—ನಂಬದಿರುವುದೇ ಇದರ ಕಾರಣ. ಬದುಕಿನಲ್ಲಿ ಗಾತ್ರಕ್ಕಿಂತ ಗುಣಕ್ಕೆ ಹೆಚ್ಚು ಬೆಲೆ ಕೊಡುತ್ತೇನೆ—ಹೇಗೆ ನಿಸರ್ಗದಲ್ಲಿ ಸಾಮೂಹಿಕ ತತ್ತ್ವಗಳು ಏಕಾಕಿ ವಸ್ತುವಿಗಿಂತ ಉನ್ನತತರ ವಾಸ್ತವತೆಯನ್ನು ಪ್ರತಿನಿಧಿಸುವುವೋ ಹಾಗೆ.

ವಾಕ್ಸ್ವಾತಂತ್ರ್ಯವನ್ನು ರಕ್ಷಿಸಲು ಮತ್ತು ಯುದ್ಧವನ್ನು ವಿರೋಧಿಸಲು ಜನ, ಅಗತ್ಯವಾದರೆ, ಬಂಧೀಖಾನೆಗಳಿಗೆ ಹೋಗಲು ತಯಾರಾಗಿರಬೇಕೆಂಬುದಾಗಿ ಐನ್‌ಸ್ಟೈನ್ ನೀಡಿದ ಹೇಳಿಕೆಗಳನ್ನು ಒಬ್ಬ ಪತ್ರಕರ್ತ ಉಲ್ಲೇಖಿಸುತ್ತ ೧೯೫೪ ಫೆಬ್ರುವರಿ ೧ರಂದು ಅವರಿಗೊಂದು ಕಾಗದ ಬರೆದ. ಆತನ ಹೆಂಡತಿ ಐನ್‌ಸ್ಟೈನರ ಬರೆಹಗಳನ್ನು ಓದಿದ್ದಳೆಂದೂ ಜರ್ಮನಿಯಲ್ಲಿ ನಾಟ್ಸಿಗಳು ಅಧಿಕಾರಾರೂಢರಾದಾಗ ಐನ್‌ಸ್ಟೈನ್ ಅಲ್ಲೇ ಉಳಿದಿದ್ದು ಆಳರಸರಿಗೆ ವಿರುದ್ಧವಾಗಿ ಮಾತಾಡಿ ಕೈದುಗೊಳ್ಳುವುದರ ಬದಲಾಗಿ ಒಂದಿಷ್ಟು ವೇಳೆಯನ್ನು ಕೂಡ ಅಪವ್ಯಯಿಸದೆ ಜರ್ಮನಿಯಿಂದ ಓಡಿಹೋದರೆಂದು ಟೀಕಿಸಿರುವಳೆಂದೂ ತಿಳಿಸಿದ. ಐನ್‌ಸ್ಟೈನರ ಈ ವರ್ತನೆಗೂ ಸಾಕ್ರೆಟೀಸನ ವರ್ತನೆಗೂ ನಡುವೆ

ಎದ್ದು ಕಾಣುವ ವೈದೃಶ್ಯವನ್ನು ಆಕೆ ಗುರುತಿಸಿದ್ದಳು. ಸಾಕ್ರೆಟೀಸ್ ತನ್ನ ದೇಶವನ್ನು ತೊರೆಯಲು ನಿರಾಕರಿಸಿದ. ಬದಲಾಗಿ 'ಸುಳ್ಳಿನೆದುರು ಕಾಳಗ ಹೂಡಲು' ಬದ್ಧಕಂಕಣನಾಗಿ ಅಲ್ಲೇ ಉಳಿದಿದ್ದ. ನಿಜಸಂಗತಿಯನ್ನು ನೇರ ವಾಗಿ ನುಡಿಯುವುದು ಸಾಮಾನ್ಯ ಮಂದಿಗಿಂತ ಸುವಿಖ್ಯಾತ ಜನರಿಗೆ ಸುಲಭ ತರವೆಂಬುದು ಆಕೆಯ ಅಭಿಪ್ರಾಯ.

೧೯೫೪ರ ಫೆಬ್ರುವರಿ ೬ರಂದು ಐನ್‌ಸ್ಟೈನ್ ಈ ಮುಂದಿನಂತೆ ಮಾರೋಲಿ ಬರೆದರು. (ಜರ್ಮನ್ ಕರಡಿನಲ್ಲಿದ್ದ ಒಂದು ಪರಾವನ್ನು ಯಾವುದೋ ಕಾರಣಕ್ಕಾಗಿ ಇಂಗ್ಲಿಷ್ ರೂಪಾಂತರದಲ್ಲಿ ಕೈಬಿಟ್ಟಿದ್ದರು. ಅದರ ಭಾಷಾಂತರ ವನ್ನು ಚೌಕಾವರಣಗಳ ಒಳಗೆ ಇಲ್ಲಿ ಕೊಟ್ಟಿದೆ):

● ಫೆಬ್ರುವರಿ ೧೯ರ ನಿಮ್ಮ ಕಾಗದಕ್ಕಾಗಿ ಧನ್ಯವಾದಗಳು. ನಿಮ್ಮ ಹೆಂಡತಿ ಎತ್ತಿರುವ ವಾದ ಪ್ರಸಕ್ತ ವಿಷಯ ಕುರಿತಂತೆ ಔಚಿತ್ಯಪೂರ್ಣವಾಗಿದೆ ಎಂದು ನನಗೆ ತೋರುತ್ತದೆ. ಸ್ವಲ್ಪ ಜನಪ್ರಿಯತೆ ಗಳಿಸಿರುವ ಒಬ್ಬ ವ್ಯಕ್ತಿ, ಸಾರ್ವಜನಿಕರಿಗೆ ಅಜ್ಞಾತನಾಗಿರುವ ಒಬ್ಬಾತನಿಗಿಂತ ಕಡಿಮೆ ಅಪಾಯದ ಸನ್ನಿವೇಶದಲ್ಲಿರುತ್ತಾನೆ ಎನ್ನುವುದು ನಿಜ. ಆದರೆ ಇಂಥ ವ್ಯಕ್ತಿ ಆಗಿಂದಾಗ್ಗೆ ತನಗೆ ಅವಶ್ಯವೆಂದು ತೋರಿದಾಗಲೆಲ್ಲ ಸಾರ್ವಜನಿಕವಾಗಿ ಮಾತಾಡಿ ತನ್ನ 'ನಾಮದ ಬಲ' ಉಪಯೋಗಿಸುವುದಕ್ಕಿಂತ ಹೆಚ್ಚಿಗೆ ಬೇರೇನು ತಾನೇ ಮಾಡಬಲ್ಲ ?

ಸಾಕ್ರೆಟೀಸನ ಜೊತೆ ಹೋಲಿಕೆ ವರ್ತಮಾನ ಸನ್ನಿವೇಶದಲ್ಲಿ ಸಮರ್ಪಕ ವಲ್ಲ. ಆತನಿಗೆ ಪ್ರಪಂಚವೆಂದರೆ ಅಥೆನ್ಸ್ ಮಾತ್ರ. ನಾನಾದರೋ ಯಾವುದೆ ನಿರ್ದಿಷ್ಟ ರಾಷ್ಟ್ರದೊಡನೆ—ಜರ್ಮನಿಯೊಡನೆಯಂತೂ ಖಂಡಿತವಾಗಿ ಅಲ್ಲ —ನನ್ನನ್ನು ಸಮೀಕರಿಕೊಳ್ಳಲಿಲ್ಲ. ಪ್ರಶ್ಯನ್ ಅಕ್ಯಾಡಮಿ ಆಫ್ ಸೈನ್ಸಸ್ಸಿನ ಸದಸ್ಯಸ್ಥಾನವೊಂದೇ [ಮತ್ತು ಎಳೆ ಅಣುಗನಾಗಿ ನಾನು ಕಲಿತ ಜರ್ಮನ್ ಭಾಷೆ] ಜರ್ಮನಿಯೊಡನೆ ಇದ್ದ ನನ್ನ ಸಂಬಂಧ.

ನಾನೊಬ್ಬ ನಿಷ್ಠಾವಂತ ಪ್ರಜಾಪ್ರಭುತ್ವವಾದಿ ಆಗಿದ್ದರೂ, ಸಾಮಾಜಿಕ ವಾಗಿ ಪ್ರಜ್ಞಾವಂತರು, ಋಜುಸ್ವಭಾವದವರು ಮತ್ತು ತಮ್ಮ ದೃಢನಂಬಿಕೆ ಗಳ ಈಡೇರಿಕೆಗೆ ತ್ಯಾಗಮಾಡಲು ಸಿದ್ಧರಾಗಿರುವ ಸ್ತ್ರೀಪುರುಷರ ಅಲ್ಪ ಸಂಖ್ಯಾತ ಸಮುದಾಯ ಇರದಿದ್ದರೆ ಮನುಕುಲ ನಾರೀತು, ಅಷ್ಟೇ ಅಲ್ಲ ನಶಿಸೀತು ಕೂಡ ಎಂದು ನನಗೆ ಚೆನ್ನಾಗಿ ಗೊತ್ತಿದೆ. ಸಾಧಾರಣ ಸಂದರ್ಭ ಗಳಿಗಿಂತ ವರ್ತಮಾನ ಸನ್ನಿವೇಶಗಳಲ್ಲಿ ಇದು ಹೆಚ್ಚು ಗಹನವಾಗಿದೆ. ನಿಜ. ಇದನ್ನು ನೀವು ವಿವರಣೆ ಇಲ್ಲದೆ ತಿಳಿಯಬಲ್ಲಿರಿ. ●

ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಯಾಗಿದ್ದ ಲೂಯಿ ಡಿ ಬ್ರಾಂಡೀಸ್ ಅವರನ್ನು ಐನ್‌ಸ್ಟೈನ್ ಪರಮ ಗೌರವದಿಂದ ಕಾಣುತ್ತಿದ್ದರು. ಬ್ರಾಂಡೀಸರ ಎಪ್ಪತ್ತನೆಯ ಹುಟ್ಟುಹಬ್ಬವನ್ನು ಆಚರಿಸುತ್ತಿದ್ದ *The Jewish Advocate* ಎಂಬ ಬಾಸ್ಟನ್ನಿನ ಒಂದು ಪತ್ರಿಕೆಗೆ ಐನ್‌ಸ್ಟೈನ್ ೧೯೩೧ ಅಕ್ಟೋಬರ್ ೧೯ರಂದು ಕಾಪುತ್‌ನಿಂದ ಕಳಿಸಿದ ಸಂಕ್ಷೇಪ ನಿರೂಪಣೆಯ ಒಂದು ಅಂಶವಿದು :

● ನೈಜಮಾನವಪ್ರಗತಿ ಸೃಜನಶೀಲಮತಿಗಿಂತಲೂ ಬ್ರಾಂದೀಸರಂಥ ವ್ಯಕ್ತಿಗಳ ಮನಸ್ಸಾಕ್ಷಿಯನ್ನು ಹೆಚ್ಚಿಗೆ ಅವಲಂಬಿಸಿದೆ. ●

ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನ್ ೧೯೩೬ ನವೆಂಬರ್ ೧೦ರಂದು ಬ್ರಾಂಡೀಸರಿಗೆ ನೇರವಾಗಿ ಈ ಮುಂದಿನ ಕಾಗದವನ್ನು ಕಳಿಸಿದರು (ಹಸ್ತಲಿಖಿತ ಮೂಲಪತ್ರ ಲೂಯಿವಿಲ್ ವಿಶ್ವವಿದ್ಯಾಲಯದ ಕಾನೂನು ಶಾಲೆಯಲ್ಲಿಬ್ರಾಂಡೀಸ್ ಪತ್ರಗಳ ಕಟ್ಟಿನಲ್ಲಿದೆ :)

● ನಿಮ್ಮ ಎಂಬತ್ತನೆಯ ಜನ್ಮದಿನದಂದು ಪರಮಗೌರವ ಮತ್ತು ಭ್ರಾತೃತ್ವಭಾವದಿಂದ ನಿಮಗೆ ಹಸ್ತಾಲಿಂಗನವೀಯುತ್ತೇನೆ. ಇಷ್ಟೊಂದು ಪ್ರಗಲ್ಭ ಬೌದ್ಧಿಕ ವರಗಳು ಇಷ್ಟೊಂದು ನಿಸ್ವಾರ್ಥ ಭಾವದೊಡನೆ ಸಂಯೋಜನೆಗೊಂಡಿದ್ದು, ಸಮಾಜಕ್ಕೆ ಸದ್ದುಗದ್ದಲವಿಲ್ಲದ ಸೇವೆ ಸಲ್ಲಿಸುವುದರಲ್ಲಿಯೇ ಸ್ವಂತ ಜೀವನದ ಪೂರ್ಣಅರ್ಥ ಕಂಡುಕೊಂಡಿರುವ ಇನ್ನೊಬ್ಬ ವ್ಯಕ್ತಿ ನನಗೆ ತಿಳಿದಿಲ್ಲ. ನೀವು ಏನನ್ನು ಸಾಧಿಸಿ ಸಿದ್ಧಿಸಿರುವಿರೊ ಅದಕ್ಕಾಗಿ ಮಾತ್ರವಲ್ಲ, ನಿಷ್ಕಲ್ಮಷ ವ್ಯಕ್ತಿಗಳ ಕೊರತೆ ಎದ್ದುಕಾಣುತ್ತಿರುವಈ ದಿನಗಳಂದು ನಿಮ್ಮಂಥವರು ನಮ್ಮ ನಡುವೆ ಇರುವಿರಲ್ಲ ಎಂಬ ಸಂತೋಷಕ್ಕಾಗಿ ಕೂಡ ನಾವೆಲ್ಲರೂ ನಿಮಗೆ ಅಭಿವಂದನೆ ಸಲ್ಲಿಸುತ್ತೇವೆ.

ಪೂಜ್ಯ ಗೌರವಗಳ ಸಮೇತ.... ●

ವರ್ಣೀಯರ ಪ್ರಗತಿಸಾಧನೆಗೆಂದೇ ಮೀಸಲಾಗಿದ್ದ ರಾಷ್ಟ್ರೀಯ ಸಂಘದ ಕಾರ್ಯದರ್ಶಿ ವಾಲ್ಟರ್‌ವೈಟ್ ಎಂಬವರು ಹೆಸರಿನಲ್ಲಿ ಮಾತ್ರ ವೈಟ್* ಅಲ್ಲ, ಚರ್ಮದ ಬಣ್ಣದಲ್ಲಿ ಕೂಡ ವೈಟ್. ಅವರೇನಾದರೂ ಬಿಳಿತನದ ಪರೀಕ್ಷೆಯಲ್ಲಿ ಉತ್ತೀರ್ಣರಾಗಬಯಸಿದ್ದರೆ ಖಂಡಿತವಾಗಿಯೂ ಆಗಬಹು

* ಬಿಳಿಯ—ಕನ್ನಡಾನುವಾದಕ

ದಾಗಿತ್ತು. ಮತ್ತು ನಮ್ಮ ಸಮಾಜದಲ್ಲಿ ನೀಗ್ರೋ ಜನಾಂಗದವರ ಪಾಲಿಗೆ ಇಂದಿಗಿಂತಲೂ ಅಂದು ಇನ್ನೂ ತೀವ್ರತರವಾಗಿ ಬಡಿಯುತ್ತಿದ್ದ ಕೋಟಲೆ ಹಿಂಸೆಗಳಿಂದ ಪಾರಾಗಬಹುದಾಗಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ತಮ್ಮ ಕಪ್ಪು ಸೋದರರ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಲು ನಿರ್ಧರಿಸಿದರು. ಇದಕ್ಕೆ ತಾವು ವೈಯಕ್ತಿಕವಾಗಿ ಎಷ್ಟು ಕಷ್ಟ ಅನುಭವಿಸಬೇಕಾದೀತೆಂಬುದರ ಅರಿವು ಅವರಿಗಿತ್ತು. ೧೯೪೭ರಲ್ಲಿ ಅವರೊಂದು ಮನಕಲಕುವ ಲೇಖನ ಬರೆದರು. ಅದರ ಶೀರ್ಷಿಕೆ, ನಾನೇಕೆ ನೀಗ್ರೋವಾಗಿ ಉಳಿದಿದ್ದೇನೆ.' ಇದು *The Saturday Review of Literature*ನ ಅಕ್ಟೋಬರ್ ೧೧ರ ಸಂಚಿಕೆಯಲ್ಲಿ ಪ್ರಕಟವಾಯಿತು. ಇದನ್ನು ಓದಿದ ಐನ್‌ಸ್ಟೈನ್ ಸ್ವಯಂಪ್ರೇರಿತರಾಗಿ ಆ ಪತ್ರಿಕೆಯ ಸಂಪಾದಕರಿಗೆ ಈ ಮುಂದಿನ ಟಿಪ್ಪಣಿ ಬರೆದು ಕಳಿಸಿದರು. ಅದರ ಅಧಿಕೃತ ಅನುವಾದವಿದು:

● ವೈಟ್ ಅವರ ಲೇಖನ ಓದಿದಾಗ ಈ ಮುಂದಿನ ಹೇಳಿಕೆಯ ಗಾಢಾರ್ಥ ಇನ್ನೂ ಆಳವಾಗಿ ಮನವರಿಕೆ ಆಗುತ್ತದೆ: ಮಾನವನ ನೈಜ ಘನತೆಗೆ ಇರುವ ದಾರಿ ಒಂದೇ—ಬವಣೆಯ ಮೂಲಕ ಸಾಗುವ ಹಾದಿ. ಸಂಪ್ರದಾಯಬದ್ಧ ಸಮಾಜವೊಂದರ ಅಂಧತೆ ಮತ್ತು ಬುದ್ಧಿಮಾಂದ್ಯಗಳಿಂದ ಈ ಬವಣೆ ಜನಿಸಿದ್ದಾದರೆ ಇದು ಸಾಧಾರಣವಾಗಿ ದುರ್ಬಲರನ್ನು ಅಂಧ ದ್ವೇಷದ ಪರಿಸ್ಥಿತಿಗೆ ಕೆಡೆಯುತ್ತದೆ. ಆದರೆ ಬಲಿಷ್ಠರನ್ನು ಅನ್ಯತ್ರ ಮಾನವನಿಗೆ ಹೆಚ್ಚು ಕಡಿಮೆ ಗಮ್ಯಾತೀತವಾದ ನೈತಿಕ ಔನ್ನತ್ಯಕ್ಕೂ ಮಹೌದಾರ್ಯಕ್ಕೂ ಉತ್ತಾರಣೆಗೊಳಿಸುತ್ತದೆ.

ವಾಲ್ಟರ್ ವೈಟ್ ಅವರ ಲೇಖನವನ್ನು ಪ್ರತಿಯೊಬ್ಬ ಸಂವೇದನಶೀಲ ವಾಚಕನೂ ನೈಜ ಕೃತಜ್ಞತಾಭಾವದಿಂದ ಓದಿ ತಲೆದೂಗುತ್ತಾನೆಂಬುದಾಗಿ ನಂಬಿದ್ದೇನೆ. ಮನವೊಪ್ಪಿಸಬಲ್ಲ ಮತ್ತು ಮನಂಬುಗಬಲ್ಲ ಶೈಲಿಯಲ್ಲಿ ಅನ್ಯಾದೃಶವಾದ ಸರಳ ಆತ್ಮವೃತ್ತಾಂತ ಕಥನ ನೀಡಿ ನಮ್ಮನ್ನು ಅವರೊಡನೆ ಮಾನವಘನತೆ ಎಡೆಗಿನ ನೋವಿನ ಹಾದಿಯ ಮೇಲೆ ಸಂಗಾತಿಗಳಾಗಿ ನಡೆಯಲು ಎಡೆಮಾಡಿಕೊಟ್ಟಿದ್ದಾರೆ. ●

ಈ ಮುಂದಿನದನ್ನು ಐನ್‌ಸ್ಟೈನ್ ೧೯೪೭ ನವೆಂಬರ್ ೪ರಂದು ಬ್ರೆಜಿಲ್ಲಿನ ಒಬ್ಬ ಪತ್ರಕರ್ತನಿಗೆ ಇಂಗ್ಲಿಷಿನಲ್ಲಿ ಬರೆದು ಕಳಿಸಿದರು. ಇದು ಸ್ವಯಂ ಸ್ಪಷ್ಟವಾಗಿದೆ:

● ನಿಮ್ಮ ಸೂಚನೆ ತತ್ತ್ವಶಃ ಸಕಾರಣೀಯವಾಗಿದೆ ಎಂದು ಅನ್ನಿಸುತ್ತದೆ. ಉತ್ಪಾದನಶೀಲರೆಂದೂ ಪ್ರಚಲಿತ ಪರಿಸ್ಥಿತಿಗಳ ಸುಧಾರಣೆಯಲ್ಲಿ ತೀವ್ರ ಮತ್ತು ನಿಸ್ವಾರ್ಥ ಆಸಕ್ತಿ ತಳೆದಿರುವವರೆಂದೂ ಹೆಸರು ಮಾಡಿರುವ ಕೆಲವೇ ಮಂದಿಯ ಮೂಲಕ ಆರ್ಥಿಕತೆಯ ಸಂಘಟನೆ: ಆದರೆ 'ತಪಾಸಣೆ'ಗಳನ್ನು ಮಾಡಿ ಆಯಬೇಕೆಂಬ ನಿಮ್ಮ ವಿಧಾನವನ್ನು ನಾನು ನಂಬಲಾರೆ. ಇದೊಂದು ವಿಶಿಷ್ಟವಾದ ಎಂಜಿನಿಯರ್ ಭಾವನೆ. ನಿಮ್ಮದೇ ಹೇಳಿಕೆಯಾದ 'ಮಾನವ ಒಂದು ಯಂತ್ರವಲ್ಲ' ಎಂಬುದರೊಂದಿಗೆ ಇದು ಹೊಂದುವುದಿಲ್ಲ.

ಇಷ್ಟು ಅಲ್ಲದೆ ನೀವೊಂದು ಸಂಗತಿಯನ್ನು ಪರಾಂಬರಿಸಬೇಕೆಂಬುದು ನನ್ನ ಅಭಿಲಾಷೆ: ಹತ್ತು ಮಂದಿ ಅತ್ಯುತ್ಕೃಷ್ಟ ವ್ಯಕ್ತಿಗಳನ್ನು ಹುಡುಕಿದರೆ ಮಾತ್ರ ಸಾಲದು—ಜನಾಂಗಗಳು ಈ ವ್ಯಕ್ತಿಗಳ ನಿರ್ಧಾರಗಳಿಗೂ ವಿಧಿಗಳಿಗೂ ಬದ್ಧವಾಗಿರುವಂತೆ ಕೂಡ ನೋಡಿಕೊಳ್ಳಬೇಕು. ಇದನ್ನು ಹೇಗೆ ಸಾಧಿಸಬೇಕು ಎನ್ನುವುದರ ಬಗ್ಗೆ ನನಗೇನೂ ಹೊಳೆಯುತ್ತಿಲ್ಲ. ಈ ಸಮಸ್ಯೆ ಯೋಗ್ಯ ವ್ಯಕ್ತಿಗಳ ಆಯ್ಕೆಯ ಸಮಸ್ಯೆಗಿಂತ ಅದೆಷ್ಟೊ ಹೆಚ್ಚು ಕಠಿಣತರವಾದದ್ದು. ಈ ತನಕ ಇದ್ದ ಹಾಗೂ ಈಗ ಇರುವ ಪರಿಸ್ಥಿತಿಗಳೊಡನೆ ಹೋಲಿಸುವಾಗ ತೀರ ಸಾಮಾನ್ಯ ಯೋಗ್ಯತೆಯ ವ್ಯಕ್ತಿಗಳು ಕೂಡ ಗದ್ದುಗೆ ತಲಪುವುದರಲ್ಲಿ ಸುಲಭವಾಗಿ ಉತ್ತೀರ್ಣರಾಗಬಹುದು. ಮುಖ್ಯವಾಗಿ ಈ ತನಕ ಮುಂದಾಳುಗಳು ಅಧಿಕಾರಕ್ಕೆ ಬಂದದ್ದು, ಯೋಚಿಸಿ ನಿರ್ಧಾರಕ್ಕೆ ಬರಬಲ್ಲ ತಮ್ಮ ಯಾವುದೇ ಸಾಮರ್ಥ್ಯದಿಂದಲ್ಲ, ಬದಲು, ಜನರ ಮೇಲೆ ಪ್ರಭಾವಬೀರಬಲ್ಲ, ಅವರ ಮನವೊಲಿಸಬಲ್ಲ ಮತ್ತು ಇತರರ ವೈಫಲ್ಯಗಳನ್ನು ತಮ್ಮ ಬಂಡವಾಳವಾಗಿ ಮಾಡಿಕೊಳ್ಳಬಲ್ಲ ಜಾಣ್ಮೆಯಿಂದ.

ಹಳೆಯ ಸಮಸ್ಯೆ: ಸಮರ್ಥರ ಹಾಗೂ ಸಜ್ಜನರ ಕರಗಳಿಗೆ ಅಧಿಕಾರ ನೀಡಲು ಏನು ಮಾಡಬೇಕು ಎಂಬುದು ಈ ತನಕ ಸಮಸ್ತ ಪ್ರಯತ್ನಗಳನ್ನೂ ಮೀರಿ ಜಿಗಿದಿದೆ. ನಾನು ಕಾಣುವಂತೆ, ದುರದೃಷ್ಟವಶಾತ್, ನೀವಾದರೂ ಇದನ್ನು ಪರಿಹರಿಸಲು ಒಂದು ಹಾದಿ ಹುಡುಕಿಲ್ಲ ●

ಝೂರಿಕ್ಕಿನಲ್ಲಿದ್ದ ಹೈನ್ರಿಚ್ ಝಾಂಗರ್ ಎಂಬವರಿಗೆ ಒಂದನೆಯ ಮಹಾಯುದ್ಧದ ವೇಳೆ ಐನ್‌ಸ್ಟೈನ್ ಬರ್ಲಿನ್ನಿನಿಂದ ೧೯೧೭ ಡಿಸೆಂಬರ್ ೬ರಂದು ಈ ಮುಂದಿನಂತೆ ಬರೆದರು. ಈ ಮಾತುಗಳು ಕಾಲಾತೀತವಾಗಿವೆ:

● ಸಂಸ್ಕೃತಿಪ್ರೇಮಿಯಾದ ಈ ಯುಗ ಇಷ್ಟೊಂದು ಭೀಕರವಾಗಿ

ನೀತ್ಯತೀತವಾಗಿರುವುದು ಹೇಗೆತಾನೇ ಸಾಧ್ಯ ? ಒಬ್ಬಾತನ ಸಹಚರರ ಬಗೆಗೆ ಔದಾರ್ಯ ಮತ್ತು ಒಲವು ಈ ಗುಣಗಳಿಗೆ ಬೇರೆಲ್ಲವಕ್ಕಿಂತಲೂ ಅಧಿಕಾಧಿಕ ಬೆಲೆ ನೀಡಬೇಕೆನ್ನುವ ಸ್ಥಿತಿಗೆ ನಾನು ಬಂದಿದ್ದೇನೆ....ನಮ್ಮ ಸಮಸ್ತ ಶ್ಲಾಘನೀಯ ತಂತ್ರವಿದ್ಯಾತ್ಮಕ ಪ್ರಗತಿ—ಸಾಕ್ಷಾತ್ ನಮ್ಮ ನಾಗರಿಕತೆಯೇ—ಮನೋವೈಕಲ್ಯದಿಂದ ನರಳುತ್ತಿರುವ ಒಬ್ಬ ನರಹತ್ಯಾಕಾರಿಯ ಕೈಯಲ್ಲಿಯ ಕುಠಾರವಾಗಿದೆ. ●

'ಸಹಿಷ್ಣುತೆ' ಎಂಬ ವಿಷಯದ ಮೇಲೆ ಅಮೆರಿಕದ ಒಂದು ನಿಯತಕಾಲಿಕೆಗೆ ಐನ್‌ಸ್ಟೈನ್ ೧೯೩೪ರಲ್ಲಿ ಒಂದು ಲೇಖನ ಬರೆದರು. ಇವರಿಗೆ ಒಪ್ಪಿಗೆ ಆಗದ ಕೆಲವು ಬದಲಾವಣೆಗಳನ್ನು ಈ ಲೇಖನದಲ್ಲಿ ಮಾಡಬೇಕೆಂದು ಆ ನಿಯತಕಾಲಿಕೆಯ ಸಂಪಾದಕರು ಅಪೇಕ್ಷಿಸಿದಾಗ ಐನ್‌ಸ್ಟೈನ್ ತಮ್ಮ ಲೇಖನವನ್ನು ವಾಪಸು ತರಿಸಿಕೊಂಡರು. ಅದು ಪ್ರಕಟವಾಗಲಿಲ್ಲ. ಆದರಿಂದ ಆಯ್ದ ಅಂಶಗಳು ಇಲ್ಲಿವೆ :

● ಸಹಿಷ್ಣುತೆ ಎಂದರೆ ನಿಜಕ್ಕೂ ಏನು ಎಂಬುದಾಗಿ ನಾನು ನನ್ನನ್ನೇ ಪ್ರಶ್ನಿಸಿಕೊಳ್ಳುತ್ತಿದ್ದಾಗ ನನ್ನ ನೆನಪಿಗೆ ವಿನೋದ ಲೇಖಕ ವಿಲ್‌ಹೆಲ್ಮ್ ಬುಶ್ ಎಂಬಾತ 'ಸಂಯಮನ'ದ ಬಗ್ಗೆ ಕೊಟ್ಟ ಹಾಸ್ಯಭರಿತ ವ್ಯಾಖ್ಯೆ ನೆನಪಿಗೆ ಬಂದಿತು :

> ಸಂಯಮನವೆಂಬುದದು ನಮಗೆ ದೊರೆವಾನಂದ :
> ನಮಗೆ ಲಭಿಸದ ವಿವಿಧ ವಸ್ತು ಸೇವೆಗಳಿಂದ !

ಅದಕ್ಕೆ ಅನುರೂಪವಾಗಿ ನಾನು ಹೀಗೆ ಹೇಳಬಲ್ಲೆ : ಒಬ್ಬಾತನ ನಡವಳಿಕೆ ನಂಬಿಕೆ ಮತ್ತು ಅಭಿರುಚಿಗಳಿಂದ ತೀರ ಭಿನ್ನವಾದ ಇತರ ವ್ಯಕ್ತಿಗಳ ಗುಣ ದೃಷ್ಟಿಕೋನ ಮತ್ತು ಕ್ರಿಯೆಗಳನ್ನು ಸಭ್ಯತೆಯಿಂದ ಪರಿಗ್ರಹಿಸುವುದೇ ಸಹಿಷ್ಣುತೆ. ಆದ್ದರಿಂದ ಸಹಿಷ್ಣುವಾಗಿರುವುದೆಂದರೆ ಇತರರ ವರ್ತನೆಗಳಿಗೆ ಮತ್ತು ಭಾವಗಳಿಗೆ ಉದಾಸೀನನಾಗಿರುವುದೆಂದರ್ಥವಲ್ಲ. ಸಹಾನುಭೂತಿ ಮತ್ತು ಅನುಭೂತಿ ಕೂಡ ಅವಶ್ಯ....

ಕಲಾಕೃತಿಯೇ ಆಗಲಿ ಗಮನಾರ್ಹ ವೈಜ್ಞಾನಿಕ ಸಾಧನೆಯೇ ಆಗಲಿ ಅದರಲ್ಲಿ ಘನವೂ ಗಂಭೀರವೂ ಆದದ್ದು ಬರುವುದು ಏಕಾಕಿ ವ್ಯಕ್ತಿತ್ವದಿಂದ. ವ್ಯಕ್ತಿಗೆ ಅನಿರ್ಬಂಧಿತ ವಿಕಾಸದ ಸಾಧ್ಯತೆಯನ್ನು ರೆನೆಸಾನ್ಸ್* ಒದಗಿ

* ೧೪ರಿಂದ ೧೬ನೆಯ ಶತಮಾನದ ತನಕ ಯೂರೋಪಿನಲ್ಲಿ ಸಂಭವಿಸಿದ ಪುನರುಜ್ಜೀವನ—ಕನ್ನಡಾನುವಾದಕ

ಸಿದಾಗ, ಆ ವೇಳೆಗೆ ಮಡುಗಟ್ಟಿದ್ದ ಯೂರೋಪಿನ ಸಂಸ್ಕೃತಿ ಮಂಕಿನಿಂದ ಹೊರನೆಗೆದು ಸೀಮೋಲ್ಲಂಘನ ಮಾಡಿತು

ಆದ್ದರಿಂದ ಸಕಲ ಸಹಿಷ್ಣುತೆಗಳಲ್ಲಿ ವ್ಯಕ್ತಿಯನ್ನು ಸಮಾಜ ಮತ್ತು ರಾಷ್ಟ್ರ ನಡೆಸಿಕೊಳ್ಳುವ ಬಗೆಯೇ ಅತ್ಯಂತ ಮುಖ್ಯವಾದದ್ದು. ವ್ಯಕ್ತಿಯ ಅಭಿವರ್ಧನೆಗೆ ಅವಶ್ಯವಾಗುವ ಸುರಕ್ಷಣೆಯನ್ನು ಅವನಿಗೆ ಒದಗಿಸಲು ರಾಷ್ಟ್ರ ನಿಜಕ್ಕೂ ಅಗತ್ಯ. ಆದರೆ ರಾಷ್ಟ್ರವೇ ಪ್ರಧಾನ ವಸ್ತುವಾಗಿ ವ್ಯಕ್ತಿ ಅದರ ದುರ್ಬಲಮನಸ್ಕ ಬಿಡಿಭಾಗವಾದಾಗ ನವುರು ಮೌಲ್ಯಗಳೆಲ್ಲವೂ ವಿನಷ್ಟ ವಾಗಿ ಹೋಗುತ್ತವೆ. ಬಂಡೆಯ ಮೇಲೆ ಮರಗಳು ಬೆಳೆಯಬೇಕಾದರೆ ಹೇಗೆ ಅದು ಮೊದಲು ನುಚ್ಚುನುರಿಗೊಂಡಿರಬೇಕೊ ಮಣ್ಣಿನ ಫಲವಂತಿಕೆ ವಿಕಸಿ ಸುವ ಮೊದಲು ಹೇಗೆ ಅದು ಸಡಿಲಗೊಂಡಿರಬೇಕೊ ಹಾಗೆ ಮಾನವ ಸಮಾಜದಿಂದ ಮೌಲ್ಯಯುತ ಸಾಧನೆ ಮೊಳೆತು ಚಿಗುರಬೇಕಾದರೆ ಸಮಾಜ ಸಾಕಷ್ಟು ಮುಕ್ತವಾಗಿದ್ದು ವ್ಯಕ್ತಿ ಆತನ ಸಾಮರ್ಥ್ಯಗಳನ್ನು ಅನಿರ್ಬಂಧಿತ ವಾಗಿ ಅಭಿವರ್ಧಿಸಿಕೊಳ್ಳಲು ಸಾಧ್ಯವಾಗುವಂತಿರಬೇಕು. ●

ಒಮ್ಮೊಮ್ಮೆ ಖುದ್ದು ಐನ್‌ಸ್ಟೈನರ ಸಹಿಷ್ಣುತೆ ಕೂಡ ತೀವ್ರ ಜಂಜಾಟಕ್ಕೆ ಗುರಿ ಆಗುವುದಿತ್ತು. ಅಂಥ ವೇಳೆ ಇವರು ಕಟು ವಿಡಂಬನೆಗೆ ಶರಣುಹೋಗು ತ್ತಿದ್ದರು. ಮುಂದಿನ ಬರವಣಿಗೆಯಲ್ಲಿ ಇದನ್ನು ಗಮನಿಸಬಹುದು.

ಐನ್‌ಸ್ಟೈನರ ಸಾಪೇಕ್ಷತಾಸಿದ್ಧಾಂತದಂಥ ಅತ್ಯಂತ ತಾಂತ್ರಿಕವೂ ವಿಶೇಷ ಗಹನವೂ ಆದ ಒಂದು ವಿಷಯ ರಾಜಕೀಯ ದಾಳಿಗಳಿಗೆ ಈಡಾಗಬೇಕಾಯಿ ತೆಂಬುದೊಂದು ವಿಪರ್ಯಾಸ. ಇವು ಬಹುತೇಕ ವಿಷಪೂರಿತವಾಗಿರು ತ್ತಿದ್ದುವು. ಜರ್ಮನಿಯಲ್ಲಿ ನಾಟ್ಸಿಗಳು ಈ ಸಿದ್ಧಾಂತವನ್ನು ಯೆಹೂದ್ಯ ಕಲುಷಿತವಾದದ್ದು ಮತ್ತು ಕಮ್ಯೂನಿಸಮ್‌ಮಯವಾದದ್ದು ಎಂದು ಹಳಿದು ಜರ್ಮನ್ ವಿಜ್ಞಾನದ ಸೆಲೆಗಳಿಗೆ ಇದು ಗರಳ ಬೆರೆಸುವುದಾಗಿ ಜರೆದರು. ಇಷ್ಟೇ ಅಲ್ಲ. ವಿಜ್ಞಾನಿಗಳು ಈ ಸಿದ್ಧಾಂತವನ್ನು ಪಾಠಮಾಡುವುದರ ಮೇಲೆ ನಿಷೇಧ ಹೇರಿದರು ಕೂಡ. ಕೇವಲ ಕೆಲವೇ ಮಂದಿ ದಿಟ್ಟರು ಈ ಹುಕು ಮನ್ನು ನಿರಾಕರಿಸಬಲ್ಲ ಮನೋದಾರ್ಢ್ಯ ಉಳ್ಳವರಾಗಿದ್ದರು. ಇವರಾದರೂ ಐನ್‌ಸ್ಟೈನರ ಹೆಸರನ್ನು ಉಚ್ಚರಿಸದೆ ಅಥವಾ 'ರಿಲೆಟಿವಿಟಿ' ಪದವನ್ನು ಬಳಸದೆ ಅಂತರ್ಗತ ಭಾವನೆಗಳನ್ನು ಬೋಧಿಸಲು ತಕ್ಕ ಯುಕ್ತಿಗಳನ್ನು ಹುಡುಕಿಕೊಂಡಿದ್ದರು.

ಸೋವಿಯತ್ ಒಕ್ಕೂಟದ ಬಗ್ಗೆ ಹೇಳುವುದಾದರೆ ಆ ದೇಶ, ಐನ್‌ಸ್ಟೈನರ ಸಿದ್ಧಾಂತ ಕಮ್ಯೂನಿಸಮ್‌ಮಯ ಎಂಬುದನ್ನು ನಾಟ್ಸಿಗಳಷ್ಟು ದೃಢವಾಗಿ ಅಂಗೀಕರಿಸಿರಲಿಲ್ಲ. ರಷ್ಯದ ಅಧಿಕೃತ ನಿಲವು ನಿಜಕ್ಕೂ ಈ ಸಿದ್ಧಾಂತ ಮಾರ್ಕ್ಸಿಸಮ್ಮಿನ ತತ್ತ್ವಶಾಸ್ತ್ರೀಯ ಆಧಾರವಾದ ತಾರ್ಕಿಕ ದ್ರವ್ಯ ವಾಸ್ತವತಾವಾದದೊಡನೆ[69] ಹೊಂದುತ್ತದೆಯೇ ಎಂಬ ಚರ್ಚೆಗೆ ಸಿಕ್ಕಿಹಾಕಿ ಕೊಂಡು ಜಟಿಲವಾಗಿತ್ತು. ತತ್ಫಲವಾಗಿ ಸೋವಿಯತ್ ವಿಜ್ಞಾನಿಯೊಬ್ಬನ ದೃಷ್ಟಿಯಿಂದ ಈ ಸಿದ್ಧಾಂತದ ಪ್ರತಿಪಾದನೆ ಸದಾ ಅಷ್ಟೊಂದು ಹಿತಕಾರಿ ಏನೂ ಆಗಿರುತ್ತಿರಲಿಲ್ಲ. ಪರಿಸ್ಥಿತಿ ಈಗ ಸುಧಾರಿಸಿದೆ. ಆದರೆ ಏಪ್ರಿಲ್ ೧೯೫೨ರಷ್ಟು ಈಚೆಗೆ ಕೂಡ ಯು.ಎಸ್.ಎಸ್.ಆರ್. ಅಕ್ಯಾಡೆಮಿ ಆಫ್ ಸೈನ್ಸಸ್ಸಿನ ಒಬ್ಬ ಸದಸ್ಯ ಐನ್‌ಸ್ಟೈನರು ಭೌತವಿಜ್ಞಾನವನ್ನು 'ಆದರ್ಶ ವಾದದ ಗೊಸರಿಗೆ'[70] ದರದರನೆ ಎಳೆದೊಯ್ದಿದ್ದರೆಂದೂ ಅವರು 'ಜ್ಞಾನ ಸ್ವನಿಷ್ಠತಾವಾದ'ದ[71] ಪ್ರತಿಪಾದಕರಾಗಿ ಅಪರಾಧವೆಸಗಿದ್ದರೆಂದೂ, ಇವು ಗಳಿಗೆ ವೈದೃಶ್ಯವಾಗಿ, ತಾರ್ಕಿಕ ದ್ರವ್ಯವಾಸ್ತವತಾವಾದ 'ದ್ರವ್ಯಾತ್ಮಕ ನಿಸರ್ಗದ ವಸ್ತುನಿಷ್ಠತೆ'ಯನ್ನು[72] ಆಧರಿಸಿದೆಯೆಂದೂ ಆರೋಪಿಸಿದ. ಇಷ್ಟೇ ಅಲ್ಲ. ಐನ್‌ಸ್ಟೈನರ ಸಿದ್ಧಾಂತಕ್ಕೆ ಬೆಂಬಲ ನೀಡಿದ್ದಕ್ಕಾಗಿ ಆ ಅಕ್ಯಾಡೆಮಿಶಿಯನ್ ಇಬ್ಬರು ರಷ್ಯನ್ ವಿಜ್ಞಾನಿಗಳನ್ನು ಸಾರ್ವಜನಿಕವಾಗಿ ತರಾಟೆಗೆ ತೆಗೆದುಕೊಂಡ. ಈ ದಾಳಿಯ ವಿವರವನ್ನು ಅಸೋಸಿಯೇಟೆಡ್ ಪ್ರೆಸ್ ಸವಿಸ್ತಾರವಾಗಿ ಪ್ರಕಟಿಸಿತು. ಬರ್ಲಿನ್ನಿನಲ್ಲಿ ಬೆಳಕು ಕಂಡ ಇದರ ವರದಿಯನ್ನು ಐನ್‌ಸ್ಟೈನರ ಸುದೀರ್ಘಕಾಲದ ಮಿತ್ರನಾಗಿದ್ದ ಒಬ್ಬ ಲಂಡನ್ ನಿವಾಸಿ ಇವರಿಗೆ ರವಾನಿಸಿದ.

ಐನ್‌ಸ್ಟೈನರ ಪತ್ರಾವಳಿ ಜೊತೆಯಲ್ಲಿ ಈ ಮುಂದಿನ ಅಪ್ರಕಟಿತ ವಿಡಂಬನಾತ್ಮಕ ಟೀಕೆ ದೊರೆಯಿತು. ಇದು ೧೯೫೦ರ ದಶಕದ ಮೊದಲ ವರ್ಷಗಳಿಗೆ ಸೇರಿದುದಾಗಿರಬಹುದೆಂದೂ ಹೆಚ್ಚುಕಡಿಮೆ ಸೋವಿಯತ್ ನಿಲವಿನಿಂದ ಒಟ್ಟಾರೆಯಾಗಿ, ಮತ್ತು ಈ ಮೇಲಿನ ಘಟನೆಯಿಂದ ವಿಶಿಷ್ಟವಾಗಿ, ಪ್ರಭಾವಿತವಾದುದಾಗಿರಬಹುದೆಂದೂ ನಂಬಲಾಗಿದೆ:

● ಸರ್ವಶಕ್ತ ಪರಮಾತ್ಮ ತನ್ನ ಸೃಷ್ಟಿಯ ಶಾಶ್ವತ ನಿಯಮಗಳನ್ನು ರೂಪಿಸುತ್ತಿದ್ದ ವೇಳೆಯಲ್ಲಿ ಆತನನ್ನು ಈ ಮುಂದಿನ ಸಂದೇಹ ಬಾಧಿಸ ತೊಡಗಿತು; ಮುಂದೆಯೂ ಆತ ಇದರಿಂದ ಮುಕ್ತನಾಗಲಾರದವನಾದ: ತಾರ್ಕಿಕ ದ್ರವ್ಯವಾಸ್ತವತಾವಾದದ ಉನ್ನತ ನಿರ್ಣಾಯಕರು ಮುಂದೆ ಒಂದು ದಿವಸ ತನ್ನ ಕೆಲವು ನಿಯಮಗಳನ್ನು ಇಲ್ಲವೇ ಎಲ್ಲ ನಿಯಮ

ಗಳನ್ನೂ ಕಾನೂನುಬಾಹಿರವಾದವೆಂದು ಘೋಷಿಸಿದರೆ ಎಂಥ ವಿಪರ್ಯಾಸವಾದೀತು !

ಆ ತರುವಾಯ, ತಾರ್ಕಿಕ ದ್ರವ್ಯವಾಸ್ತವತಾವಾದದ ಪ್ರವಾದಿ ಪುರುಷೋತ್ತಮರನ್ನೂ ಪಂಡಿತವರೇಣ್ಯರನ್ನೂ ಸೃಷ್ಟಿಸುತ್ತಹೋದಂತೆ ಈ ಮೇಲಿನದಕ್ಕೆ ಸದೃಶವಾದ ಇನ್ನೊಂದು ಬಗೆಯ ಸಂದೇಹ ಆತನ ಆತ್ಮದೊಳಕ್ಕೆ ಹಣಿಕಿತು. ಆದರೆ ಮರುಕ್ಷಣವೇ ಆತನಿಗೆ ಆ ಪ್ರವಾದಿಗಳೂ ಪಂಡಿತರೂ ತಾರ್ಕಿಕ ದ್ರವ್ಯವಾಸ್ತವತಾವಾದದ ಸೂತ್ರವಿಧಿಗಳು[73] ವಿವೇಕ ಮತ್ತು ಸತ್ಯ ಇವನ್ನು ಕುರಿತಂತೆ ವ್ಯತಿರಿಕ್ತವಾಗಿರಬಹುದೆಂಬ ತೀರ್ಮಾನಕ್ಕೆ ಎಂದೂ ಬರಲಾರರೆಂಬುದರ ಬಗ್ಗೆ ತಾನು ಪೂರ್ಣ ಭರವಸೆ ತಳೆದಿರಬಹುದೆಂದು ಜ್ಞಾನೋದಯವಾಯಿತು. ಒಡನೆ ಆತ ತನ್ನ ಚಿತ್ತಸ್ವಾಸ್ಥ್ಯವನ್ನು ಮರುಗಳಿಸಿಕೊಂಡ. ●

ಜರ್ಮನಿಯಲ್ಲಿದ್ದ ಐನ್‌ಸ್ಟೈನರಿಗೆ ಇಂಗ್ಲೆಂಡಿನ ಒಬ್ಬಪತ್ರಕರ್ತ ಒಂದು ಪ್ರಶ್ನೆ ಕಳಿಸಿದ. ಇದನ್ನು ಮೊದಲು ಎತ್ತಿದವ ಎಡಿಸನ್.[74] ಪ್ರಶ್ನೆ: ಮರಣಶಯ್ಯೆಯಲ್ಲಿ ನಿಮ್ಮ ಜೀವನವನ್ನು ನೀವು ಸಿಂಹಾವಲೋಕಿಸಿದ್ದಾದರೆ ಯಾವ ಸಂಗತಿಗಳನ್ನು ಆಧರಿಸಿ ಅದು ಸಫಲ ಅಥವಾ ವಿಫಲ ಎಂಬುದಾಗಿ ನಿರ್ಧರಿಸುವಿರಿ ? ೧೯೩೦ ನವೆಂಬರ್ ೧೨ರಂದು ಐನ್‌ಸ್ಟೈನ್ ಈ ತೆರನಾಗಿ ಉತ್ತರಿಸಿದರು :

● ಮರಣಶಯ್ಯೆಯಲ್ಲಾಗಲಿ ಆ ಮೊದಲೇ ಆಗಲಿ ನನಗೆ ನಾನೇ ಈ ಪ್ರಶ್ನೆ ಕೇಳಿಕೊಳ್ಳಲಾರೆ. ನಿಸರ್ಗ ಎಂಜಿನಿಯರ್ ಅಲ್ಲ ಅಥವಾ ಗುತ್ತಿಗೆದಾರನಲ್ಲ ; ಇನ್ನು ನಾನಾದರೋ ಸ್ವತಃ ನಿಸರ್ಗದ ಒಂದ ಅಂಶ. ●

ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ಬ್ರೂಕ್ಲಿನ್, ಎನ್.ವೈ., ಇಗರ್ಜಿಯ ಒಬ್ಬ ಪಾದ್ರಿ ೧೯೫೦ ನವೆಂಬರ್ ೧೩ರಂದು ಕಾಗದ ಬರೆದು, ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಆಗ ಕಾಲೇಜ್ ವಿದ್ಯಾರ್ಥಿ ಆಗಿದ್ದ ತಾನು, ಐನ್‌ಸ್ಟೈನರ ದಸ್ಕತ್ತು ಸಹಿತವಾದ ಛಾಯಾಚಿತ್ರವನ್ನು ಕೊಂಡಿದ್ದು ದಾಗಿಯೂ ಅಂದಿನಿಂದ ಅದನ್ನು ಅತ್ಯಂತ ಜತನದಿಂದ ಕಾಪಾಡಿಕೊಂಡು ಬಂದಿರುವುದಾಗಿಯೂ ತಿಳಿಸಿದ. ಹಿಟ್ಲರ್ ಅಧಿಕಾರಾರೂಢನಾದ ತರುಣದಲ್ಲೇ ಐನ್‌ಸ್ಟೈನ್ ನೀಡಿದ್ದ ಒಂದು ಹೇಳಿಕೆಯನ್ನು ತಾನು ಅನೇಕ ವೇಳೆ ಉಪ ದೇಶವೇದಿಕೆಯಿಂದ ಬೋಧಿಸಿದುದಾಗಿ ಪಾದ್ರಿ ಆ ಕಾಗದದಲ್ಲಿ ನಿರೂಪಿಸಿದ್ದ. ಆ ಹೇಳಿಕೆಯ ಎರಡು ಪರಿಚ್ಛೇದಗಳನ್ನು ಐನ್‌ಸ್ಟೈನರ ಛಾಯಾಚಿತ್ರದ ಜೊತೆಗೆ ಚೌಕಟ್ಟು ಹಾಕಿಸಿ ಇಟ್ಟುಕೊಳ್ಳಬೇಕೆಂಬುದು ತನ್ನ ಅಪೇಕ್ಷೆ ಎಂಬುದಾಗಿ ತಿಳಿಸಿದ.

ತಾನೊಬ್ಬ ನೆತ್ತರುಹೀರುಕ ಎಂಬ ಭಾವ ಐನ್‌ಸ್ಟೈನರಿಗೆ ಬರಬಾರ ದೆಂದು ಅರಿಕೆ ಸಲ್ಲಿಸುತ್ತ ಒಂದು ಚೆಕ್ಕನ್ನು ಆ ಕಾಗದಕ್ಕೆ ಲಗತ್ತಿಸಿದ್ದ— ಪಾವತಿ ಎಂಬುದಾಗಿ ಅಲ್ಲ, ಏಕೆಂದರೆ ಇಂಥ ಕೈಬರೆಹದ ನಿರೂಪಣೆಯನ್ನು ದುಡ್ಡು ಕೊಟ್ಟು ಪಡೆಯಲು ಸಾಧ್ಯವಾಗದೆಂದು ಆವನಿಗೆ ಗೊತ್ತಿತ್ತು, ಬದಲು ಐನ್‌ಸ್ಟೈನ್ ಆ ಚೆಕ್ಕನ್ನು ತಮಗೆ ಯುಕ್ತ ಕಂಡಂತೆ ಉಪಯೋಗಿಸ ಬಹುದಾದಂಥ ಒಂದು ಉಡುಗೊರೆಯಾಗಿ ಮತ್ತು ತನ್ನ ಕೃತಜ್ಞತೆಯ ಒಂದು ಕುರುಹಾಗಿ. ಆತ ಉಲ್ಲೇಖಿಸಿದ್ದ ಆ ನಿರೂಪಣೆಯನ್ನು ಬೇರೆ ಒಂದು ಹಾಳೆಯ ಮೇಲೆ ನಕಲು ಮಾಡಿ ಲಗತ್ತಿಸಿದ್ದ. ಅದು ಹೀಗಿದೆ:

"ಸ್ವಾತಂತ್ರ್ಯಪ್ರೇಮಿಯಾದ ನಾನು, ಜರ್ಮನಿಯನ್ನು ಕ್ರಾಂತಿ ಕಬಳಿಸಿ ದಾಗ, ಸ್ವಾತಂತ್ರ್ಯದ ರಕ್ಷಣೆಗಾಗಿ ವಿಶ್ವವಿದ್ಯಾಲಯಗಳತ್ತ ದೃಷ್ಟಿ ಹರಿಸಿದೆ. ಏಕೆಂದರೆ ಸತ್ಯವನ್ನು ಸಮರ್ಥಿಸುವುದರಲ್ಲಿ ತಮಗಿದ್ದ ನಿಷ್ಠೆಯ ಬಗ್ಗೆ ಅವು ಸದಾ ಹೆಮ್ಮೆ ತಳೆದಿರುತ್ತಿದ್ದುವೆಂದು ನನಗೆ ತಿಳಿದಿತ್ತು. ಆದರೆ ಏನೂ ಆಗ ಲಿಲ್ಲ; ವಿಶ್ವವಿದ್ಯಾಲಯಗಳ ಬಾಯಿಗೆ ಒಡನೆ ಬೀಗ ಜಡಿಯಲಾಯಿತು. ತರುವಾಯ ನಾನು ವೃತ್ತಪತ್ರಿಕೆಗಳ ಮಹಾ ಸಂಪಾದಕರತ್ತ ದೃಷ್ಟಿ ಹರಿಸಿದೆ. ಅವೇ ಹಿಂದಿನ ದಿನಗಳಲ್ಲಿ ಇವರು ಬರೆದಿದ್ದಂಥ ಕಿಡಿಕಾರುವ ಸಂಪಾದಕೀಯ ಗಳು ಇವರ ಸ್ವಾತಂತ್ರ್ಯಪ್ರೇಮವನ್ನು ಸಾರಿ ಹೇಳುತ್ತಿದ್ದುವು. ಆದರೆ

ವಿಶ್ವವಿದ್ಯಾಲಯಗಳ ತೆರದಲ್ಲಿಯೇ ಆ ವೃತ್ತಪತ್ರಿಕೆಗಳ ಧ್ವನಿಯನ್ನು ಕೂಡ ಮುಂದಿನ ಕೆಲವೇ ವಾರಗಳಲ್ಲಿ ಮೌನಗೊಳಿಸಲಾಯಿತು. ಬಳಿಕ ನಾನು ಬಿಡಿ ಲೇಖಕರತ್ತ ದೃಷ್ಟಿ ಹರಿಸಿದೆ. ಇವರು ಜರ್ಮನಿಯ ಸಾಹಿತ್ಯದರ್ಶಿಗಳಾಗಿ ಬೇಕಾದಷ್ಟು ಬರೆದಿದ್ದರು—ವಿಶೇಷವಾಗಿ ಆಧುನಿಕ ಜೀವನದಲ್ಲಿ ಸ್ವಾತಂತ್ರ್ಯದ ಸ್ಥಾನದ ಬಗೆಗೆ. ಆದರೆ ಇವರು ಕೂಡ ಮೂಕರಾಗಿದ್ದರು.

"ಹಿಟ್ಲರನ ಸತ್ಯದಮನ ನೀತಿಯ ಪ್ರಚಾರದ ವಿರುದ್ಧ ಏಕಾಂಗಿಯಾಗಿ ಸೆಟೆದೆದ್ದು ನಿಂತದ್ದು ಇಗರ್ಜಿ ಮಾತ್ರ. ತತ್ಪೂರ್ವದಲ್ಲಿ ನನಗೆ ಇಗರ್ಜಿ ಬಗ್ಗೆ ಯಾವ ವಿಶೇಷಾಸಕ್ತಿಯೂ ಇರಲಿಲ್ಲ. ಆದರೆ ಈಗ ನಾನು ಅಧಿಕ ಪ್ರೇಮ ವನ್ನೂ ಗೌರವವನ್ನೂ ತಳೆದಿದ್ದೇನೆ. ಏಕೆಂದರೆ ಬೌದ್ಧಿಕಸತ್ಯ ಮತ್ತು ನೈತಿಕ ಸ್ವಾತಂತ್ರ್ಯ ಇವನ್ನು ಬೆಂಬಲಿಸುವಲ್ಲಿ ಇಗರ್ಜಿಗೆ ಮಾತ್ರ ಧೈರ್ಯವೂ ನಿಷ್ಠೆಯೂ ಇದ್ದುದಾಗಿದೆ. ಹಿಂದೊಮ್ಮೆ ಯಾವುದನ್ನು ನಾನು ತಿರಸ್ಕಾರದಿಂದ ಉಪೇಕ್ಷಿಸಿದ್ದೆನೋ ಇಂದು ಅದನ್ನು ಯಾವ ಸಂಕೋಚವೂ ಇಲ್ಲದೆ ಪ್ರಶಂಸಿಸುತ್ತೇನೆ ಎಂದು ಹೇಳಲು ಬದ್ಧನಾಗಿದ್ದೇನೆ."

೧೯೫೦ ನವೆಂಬರ್ ೧೪ರಂದು ಐನ್‌ಸ್ಟೈನ್ ಇಂಗ್ಲಿಷಿನಲ್ಲಿ ಈ ಮುಂದಿನಂತೆ ಮಾರೋಲೆ ಬರೆದರು :

● ನವೆಂಬರ್ ೧೧ರ ನಿಮ್ಮ ಕಾಗದದಲ್ಲಿ ನೀವು ನನ್ನೊಡನೆ ವ್ಯವಹರಿಸಿರುವ ನವುರು ಮತ್ತು ಉದಾತ್ತ ರೀತಿಯಿಂದ ತುಂಬ ಪ್ರಭಾವಿತನಾಗಿದ್ದೇನೆ. ನೀವು ಉಲ್ಲೇಖಿಸಿರುವ ಹೇಳಿಕೆಯ ಪದಸಂಯೋಜನೆ ನನ್ನದಲ್ಲ. ಜರ್ಮನಿಯಲ್ಲಿ ಹಿಟ್ಲರ್ ಅಧಿಕಾರ ಗದ್ದುಗೆ ಏರಿದ ತರುಣದಲ್ಲಿ ನಾನು ಈ ವಿಷಯಗಳ ಬಗ್ಗೆ ಒಬ್ಬ ಪತ್ರಿಕಾಕರ್ತನೊಡನೆ ಮೌಖಿಕ ಸಂಭಾಷಣೆ ನಡೆಸಿದ್ದುಂಟು, ಅಲ್ಲಿಂದೀಚೆಗೆ ನನ್ನ ಅನ್ನಿಸಿಕೆಗಳನ್ನು ಖುದ್ದು ನನಗೇ ಗುರುತು ಹತ್ತದಷ್ಟರ ಮಟ್ಟಿಗೆ ವಿಸ್ತರಿಸಲಾಗಿದೆ ಮತ್ತು ಉತ್ಪ್ರೇಕ್ಷಿಸಲಾಗಿದೆ. ಆದ್ದರಿಂದ ನೀವು ಕಳಿಸಿದ ನಿರೂಪಣೆಯನ್ನು ನನ್ನದೆಂದು ದೃಢಮನಸ್ಸಾಕ್ಷಿಯಿಂದೇನೂ ನಕಲು ಮಾಡಲಾರೆ.

ಇತಿಹಾಸದ ಉದ್ದಕ್ಕೂ ಅಧಿಕೃತ ಪುರೋಹಿತಶಾಹಿ ವಹಿಸಿದ ಪಾತ್ರದ ಬಗ್ಗೆ, ತತ್ರಾಪಿ ಅದರ ರಾಜಕೀಯ ಚಟುವಟಿಕೆಗಳ ಬಗ್ಗೆ, ನನ್ನ ದೃಷ್ಟಿಯಾದರೂ ನಿಮ್ಮದರಂತೆಯೇ ಮುಖ್ಯವಾಗಿ ಖಂಡನಾತ್ಮಕವಾದದ್ದು. ಎಂದೇ ಈ ವಿಷಯ ನನಗೆ ಇನ್ನೂ ಹೆಚ್ಚು ಪೇಚಿನದಾಗಿದೆ. ಹೀಗಾಗಿ, ನನ್ನ ಮೊದಲಿನ ಹೇಳಿಕೆಯನ್ನು ನನ್ನದೇ ಆದ ವಾಸ್ತವ ಪದಗಳಿಗೆ ಬಿಟ್ಟು ಇಳಿಸಿ

ದಾಗಲೂ (ಅವುಗಳ ವಿವರ ನನ್ನ ನೆನಪಿನಲ್ಲಿಲ್ಲ) ಅದು ನನ್ನ ಒಟ್ಟಾರೆ ನಿಲವಿನ ಬಗ್ಗೆ ತಪ್ಪು ಭಾವನೆಯನ್ನು ಕೊಡುತ್ತದೆ.

ಇದು ಹಾಗಿರಲಿ. ನಿಮ್ಮ ಉದ್ದೇಶವೇನೆಂದು ನೀವು ಸೂಚಿಸಿದ ಪಕ್ಷದಲ್ಲಿ ಅದಕ್ಕೆ ಪ್ರಯೋಜನವಾಗಬಲ್ಲ ಬೇರೇನನ್ನಾದರೂ ಸಂತೋಷದಿಂದ ಬರೆಯಲು ಸಿದ್ಧನಿದ್ದೇನೆ. ●

ಐನ್‌ಸ್ಟೈನರ ಆ ಹೇಳಿಕೆ ಸರಿಯಾದುದಲ್ಲವೆಂದು ತಿಳಿದು ತನಗೆ ಸಂತೋಷವಾಯಿತೆಂದು ಆ ಪಾದ್ರಿ ೧೯೫೦ ನವೆಂಬರ್ ೧೬ರಂದು ಉತ್ತರ ಬರೆದ. ಏಕೆಂದರೆ ಇಗರ್ಜಿಯ ಸಮಗ್ರ ಐತಿಹಾಸಿಕ ಪಾತ್ರದ ಬಗ್ಗೆ ಆತನಿಗೂ ಸಂದೇಹ ಇದ್ದೇ ಇತ್ತು. ಈ ವಿಷಯವನ್ನು ಕುರಿತು ಒಂದಿಷ್ಟು ವ್ಯಾಖ್ಯಾನ ಬಿತ್ತರಿಸುತ್ತ ಆತ, ಒಮ್ಮೆಗೇ, ತಾನು 'ಬೋಧಿಸುತ್ತಿರುವುದಕ್ಕಾಗಿ' ಕ್ಷಮಾಯಾಚನೆ ಮಾಡಿದ. ಐನ್‌ಸ್ಟೈನ್ ನೀಡಬೇಕೆಂದಿರುವ ಹೇಳಿಕೆ ಯಾವ ವಿಷಯದ ಮೇಲಿರಬೇಕೆಂಬ ನಿರ್ಧಾರವನ್ನು ಅವರಿಗೇ ಬಿಡಲಾಗಿದೆ ಎಂದು ತಿಳಿಸಿದ. ಐನ್‌ಸ್ಟೈನರ ಪ್ರಮಾದಿಪ್ರಜ್ಞೆಯನ್ನು ಸ್ವಾಗತಿಸುತ್ತ ಭಗವದನುಗ್ರಹ ಅವರ ಮೇಲಿರಲೆಂದು ಹಾರೈಸಿ ಪತ್ರವನ್ನು ಮುಕ್ತಾಯಗೊಳಿಸಿದ.

ಐನ್‌ಸ್ಟೈನ್ ನೀಡಿದ ಹೇಳಿಕೆ ಇಲ್ಲಿದೆ. ಇದನ್ನು ೧೯೫೦ ನವೆಂಬರ್ ೨೦ ರಂದು ಇಂಗ್ಲಿಷಿನಲ್ಲಿ ರವಾನಿಸಲಾಯಿತು:

● ನಮ್ಮ ಕ್ರಿಯೆಗಳಲ್ಲಿ ನೈತಿಕ ಪಾರಿಶುದ್ಧ್ಯವನ್ನು ಕಾಪಾಡಿಕೊಳ್ಳಲು ಶ್ರಮಿಸುವುದೇ ಅತ್ಯಂತ ಪ್ರಮುಖವಾದ ಮಾನವ ಸಾಹಸ. ನಮ್ಮ ಆಂತರಿಕ ಸಮತೋಲ ಮತ್ತು ಖಾಸಾ ನಮ್ಮ ಅಸ್ತಿತ್ವ ಕೂಡ ಅದನ್ನು ಅವಲಂಬಿಸಿದೆ. ನಮ್ಮ ಕ್ರಿಯೆಗಳಲ್ಲಿಯ ನೈತಿಕ ಪಾರಿಶುದ್ಧ್ಯವೊಂದೇ ಜೀವನಕ್ಕೆ ಸೌಂದರ್ಯವನ್ನೂ ಗಾಂಭೀರ್ಯವನ್ನೂ ನೀಡಬಲ್ಲದು.

ಇದನ್ನೊಂದು ಜೀವಂತ ಬಲವಾಗಿಸಿ ಸ್ಪಷ್ಟಚಿತ್ರವಾಗಿ ಪಡಿಮೂಡಿಸುವುದೇ, ಪ್ರಾಯಶಃ ಶಿಕ್ಷಣದ ಆದ್ಯ ಕರ್ತವ್ಯ.

ನೈತಿಕತೆಯ ಅಸ್ತಿಭಾರ ಕಟ್ಟುಕತೆಯ ಮೇಲೆ ಅವಲಂಬಿತವಾಗಿರುವಂತೆ ಮಾಡಬಾರದು. ಅಥವಾ ಅದು ಯಾವುದೇ ಅಧಿಕಾರಕ್ಕೆ ಬಂಧಿತವಾಗಿರಬಾರದು. ಹೀಗಲ್ಲವಾದರೆ ಕಟ್ಟುಕತೆಯ ಬಗೆಗೆ ಇಲ್ಲವೇ ಅಧಿಕಾರದ ಕ್ರಮಬದ್ಧತೆಯ ಬಗೆಗೆ ಸಂದೇಹ ಮೊಳೆತು ಯೋಗ್ಯ ನಿರ್ಣಯ ಮತ್ತು ಕ್ರಿಯೆಯ ಅಸ್ತಿಭಾರಕ್ಕೆ ಅದು ಗಂಡಾಂತರಕಾರಿ ಆಗಬಹುದು. ●

ಕ್ರೈಸ್ತಿಯನರ ಮತ್ತು ಯೆಹೂದ್ಯರ ರಾಷ್ಟ್ರೀಯ ಸಮ್ಮೇಳನದಿಂದ ಐನ್‌ಸ್ಟೈನರಿಗೆ ಹೆಚ್ಚು ಕಡಿಮೆ ಹುಕುಮ್ಮೇ ಎನ್ನುವಂಥ ಒಂದು ಪತ್ರ ೧೯೪೭ ಜನವರಿ ೨೭ರಂದು ಬಂದಿತು. ಆ ಸಮ್ಮೇಳನ ಐನ್‌ಸ್ಟೈನರಿಂದ ಸುಮಾರು ೨೫೦ರಿಂದ ೫೦ ಪದಗಳಲ್ಲಿ 'ಅಮೆರಿಕನ್ ಭಾತೃತ್ವ'ವನ್ನು ಸಮರ್ಥಿಸುವ ಒಂದು ತಂತಿ ಸಂದೇಶವನ್ನು ಬೇಡಿತ್ತು. ಚರ್ವಿತ ಚರ್ವಣ ಹೇಳಿಕೆಗಳನ್ನು ಅಪೇಕ್ಷಿಸುವ—ಅಲ್ಲ, ಬರೆಯಬೇಕೆಂದು ಹೆಚ್ಚು ಕಡಿಮೆ ವಿಧಿಸುವ—ವಿಷಯವದು. ಆದರೆ ಐನ್‌ಸ್ಟೈನ್ ಆ ಕಷ್ಟಕ್ಕೆ ಕೆಡೆಯಲಿಲ್ಲ. ಅವರು ಈ ಮುಂದಿನ ಹೇಳಿಕೆಯನ್ನು ಇಂಗ್ಲಿಷಿನಲ್ಲಿ ಕಳಿಸಿದರು :

● ವರ್ತಮಾನಕಾಲದ ಮತಧರ್ಮಗಳನ್ನು ನಂಬುವವರು ಅವುಗಳ ಸಂಸ್ಥಾಪಕರ ದೃಷ್ಟಿ ಏನಿತ್ತು ಎಂಬುದನ್ನು ಗಮನಿಸಿ ಅದರಂತೆ ಪ್ರಾಮಾಣಿಕವಾಗಿ ಯೋಚಿಸಲು ಹಾಗೂ ವರ್ತಿಸಲು ಪ್ರಯತ್ನಿಸಿದ್ದಾದರೆ ಆಗ ವಿವಿಧ ಮತಧರ್ಮಾನುಯಾಯಿಗಳ ನಡುವೆ ಮತಧರ್ಮಗಳನ್ನು ಆಧರಿಸಿ ಯಾವ ದ್ವೇಷಭಾವವೂ ಉಳಿದಿರದು. ಮತಧರ್ಮಗಳ ಹೆಸರಿನಲ್ಲಿ ಕಂಡುಬರುವ ಘರ್ಷಣೆಗಳು ಕೂಡ ಆಗ ಅಗಣನೀಯವೆಂದೆನ್ನಿಸಿ ತಮ್ಮ ಬೆಲೆ ಕಳೆದು ಕೊಂಡಿರುತ್ತವೆ. ●

ಅದೇ ವರ್ಷದ ಅಕ್ಟೋಬರ್ ೧೪ರಂದು ಐನ್‌ಸ್ಟೈನರಿಗೆ ಸುದೀರ್ಘ ತಾರು ಸಂದೇಶವೊಂದು ಬಂದಿತು. ನ್ಯೂಯಾರ್ಕ್ ನಗರದ ರಿವರ್ಸೈಡ್ ಡ್ರೈವಿನಲ್ಲಿ ನಿವೇಶನವೊಂದನ್ನು ನಿವೇದಿಸಲಿರುವ ಭವ್ಯ ಮತ್ತು ಆಕರ್ಷಕ ಸಮಾರಂಭ ಅಕ್ಟೋಬರ್ ೧೯ರಂದು ಜರಗಲಿದೆಯೆಂದೂ ಅದರಲ್ಲಿ ಅನೇಕ ರಾಜನೀತಿಜ್ಞರು ಹಾಗೂ ಪ್ರತಿಷ್ಠಿತರು ಭಾಷಣ ಮಾಡಲಿರುವರೆಂದೂ ವಾರ್ಸಾ ಘೆಟ್ಟೋದಲ್ಲಿ[75] ಅಸು ತೆತ್ತ ವೀರರು ಮತ್ತು ಯೂರೋಪಿನಲ್ಲಿ ಹುತಾತ್ಮರಾದ ಅರುವತ್ತು ಲಕ್ಷ ಯೆಹೂದ್ಯರ ನೆನಪಿಗಾಗಿ ಮುಂದೊಂದು ದಿವಸ ಆ ನಿವೇಶನದಲ್ಲಿ ಸ್ಮಾರಕವನ್ನು ನಿರ್ಮಿಸಲಾಗುವುದೆಂದೂ. ಈ ಸಮಾರಂಭಕ್ಕೆ ಐನ್‌ಸ್ಟೈನ್ ಗೌರವಾನ್ವಿತ ಅತಿಥಿಯಾಗಿ ಆಗಮಿಸಬೇಕೆಂದೂ ಆ ಸಂದೇಶದಲ್ಲಿ ಪ್ರಾರ್ಥಿಸಲಾಗಿತ್ತು. ಈ ಕೋರಿಕೆಯನ್ನು ಮನ್ನಿಸಿ ಅಲ್ಲಿಗೆ ಬರುವುದು ಅವರಿಗೆ ಸಾಧ್ಯವಾಗದಲ್ಲಿ ಅಕ್ಟೋಬರ್ ೧೬ರ ಮೊದಲು ಒಂದು ಸಂದೇಶವನ್ನಾದರೂ ರವಾನಿಸಿ ಸಮಾರಂಭಕ್ಕೆ ಶುಭಹಾರೈಸಿದರಾದೀತೆಂದು ಅರಿಕೆ ಸಲ್ಲಿಸಲಾಗಿತ್ತು.

ಐನ್‌ಸ್ಟೈನರ ಹೃದಯಕ್ಕೆ ಅತ್ಯಂತ ಪ್ರಿಯವಾಗಿದ್ದ ಈ ವಿಷಯದಲ್ಲಿ ಅವರಿಗೆ ಯಾವ ಪುಸಲಾವಣೆಯೂ ಅಗತ್ಯವಾಗಿರಲಿಲ್ಲ. ೧೯೪೭ ಅಕ್ಟೋಬರ್ ೧೯ರಂದು ಈ ಮುಂದಿನ ಸಂದೇಶ ಕಳಿಸಿದರು :

● ಇಂದಿನ ಪವಿತ್ರ ಸಭೆಗೆ ವಿಶೇಷ ಮಹತ್ತ್ವವುಂಟು. ಆಧುನಿಕ ಇತಿಹಾಸ ನಿರೂಪಿಸಲೇಬೇಕಾದ ಅತ್ಯಂತ ಹೇಯ ಜನಾಂಗಹತ್ಯೆಗೂ ನಮಗೂ ನಡುವೆ ಇರುವ ಕಾಲಾವಧಿ ಕೆಲವೇ ವರ್ಷಗಳದು. ಮತಾಂಧ ಮಂದಿಯ ಕುಕೃತ್ಯವಿದಲ್ಲ, ಬದಲು, ಸಮರ್ಥ ರಾಷ್ಟ್ರವೊಂದರ ಸರ್ಕಾರ ಅಂತಃಕರಣ ರಹಿತ ಯೋಜನಾನುಸಾರ ಪ್ರವರ್ತಿಸಿದ ಪಾಶವೀಹತ್ಯೆ. ಮತಿಭ್ರಾಂತ ಜರ್ಮನರ ಪೀಡನೆ ತಾಡನೆಗಳಿಂದ ಪಾರಾಗಿ ಉಳಿದಿರುವವರ ಪಾಡು ಮನುಕುಲದ ನೈತಿಕ ಮನಸ್ಸಾಕ್ಷಿ ಎಷ್ಟರಮಟ್ಟಿಗೆ ಅಧಃಪತನಗೊಂಡಿದೆ ಎಂಬುದಕ್ಕೆ ವಿಪುಲ ಸಾಕ್ಷ್ಯವನ್ನು ಒದಗಿಸುತ್ತದೆ.

ಈ ಕರಾಳ ದೌಷ್ಟ್ಯವನ್ನು ಮನುಷ್ಯರೆಲ್ಲರೂ ಮೌನವಾಗಿ ಸ್ವೀಕರಿಸಲು ಸಿದ್ಧರಿಲ್ಲ ಎಂಬುದಕ್ಕೆ ನಿದರ್ಶನ ಇಂದಿನ ಸಭೆ. ವ್ಯಕ್ತಿಯ ಘನತೆ ಮತ್ತು ನೈಸರ್ಗಿಕ ಹಕ್ಕುಗಳನ್ನು ಗಳಿಸುವ ಸಂಕಲ್ಪವೇ ಈ ಸಭೆಗೆ ಸ್ಫೂರ್ತಿ. ಸಹ್ಯ ಜೀವನ ಮಾನವನಿಗೆ ಒದಗಬೇಕಾದರೆ—ಅಷ್ಟೇಕೆ ಸಾಕ್ಷಾತ್ ಆತನ ಅಸ್ತಿತ್ವವೇ ಉಳಿಯಬೇಕಾದರೆ—ನಾವು ಶಾಶ್ವತ ನೈತಿಕಬೇಡಿಕೆಗಳಿಗೆ ಬದ್ಧರಾಗಿರುವುದು ಎಷ್ಟು ಅನಿವಾರ್ಯವೆಂಬುದನ್ನು ಈ ನಿಲವು ಶ್ರುತಪಡಿಸುತ್ತದೆ.

ಒಬ್ಬ ವ್ಯಕ್ತಿಯಾಗಿ, ಮತ್ತು ಒಬ್ಬ ಯೆಹೂದ್ಯಕುಲಜನಾಗಿ ನಾನು ಈ ನಿಲವನ್ನು ಮೆಚ್ಚುತ್ತೇನೆ. ಮತ್ತು ಇದಕ್ಕಾಗಿ ನಿಮಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ●

ಅಮೆರಿಕ ದೇಶದ ಸರಕುಸಾಗಣೆ ಹಡಗೊಂದರ ಮುಖ್ಯ ಎಂಜಿನಿಯರ್, ಅಮೆರಿಕದಲ್ಲಿದ್ದ ಐನ್‌ಸ್ಟೈನರಿಗೆ, ೧೯೪೬ ಅಕ್ಟೋಬರ್ ೩ರಂದು, ಒಂದು ಕಾಗದ ಬರೆದ. ಇದರಲ್ಲಿ ಆತ ಆ ಹಡಗಿನೊಳಗೆ ನಡೆದಿದ್ದ ಒಂದು ಘಟನೆಯನ್ನು ರಂಗುರಂಗಾಗಿ ಬಣ್ಣಿಸಿದ್ದ. ಅರೆಹೊಟ್ಟೆಯಿಂದ ಬಡಕಲಾಗಿದ್ದ ಒಂದು ಮರಿಬೆಕ್ಕನ್ನು ಜರ್ಮನಿಯ ಕಡಲದಂಡೆಯಲ್ಲಿ ಕಂಡ ಹಡಗಿನ ಮೇಸ್ತ್ರಿಯೂ ಬಡಗಿಯೂ ಅದನ್ನು ಹಡಗಿಗೆ ಒಯ್ದು ದತ್ತು ಸ್ವೀಕರಿಸಿದರು ಮತ್ತು ಸಮೃದ್ಧ ಆಹಾರವಿತ್ತು ಚೆನ್ನಾಗಿ ಪೋಷಿಸಿದರು. ಬೆಕ್ಕು ಗುಂಡಗೆ ಉಬ್ಬಿಕೊಂಡಿತು. ತನ್ನ ಸಾಕುತಂದೆಯರನ್ನು ವಿಶೇಷವಾಗಿ ಹಚ್ಚಿಕೊಂಡಿತು. ಒಮ್ಮೆ ತನ್ನೊಡನೆ ಆಟವಾಡಲು ಯತ್ನಿಸಿದ ಒಬ್ಬ ನಾವಿಕನನ್ನು ಅದು ಪರಚಿತು. ಖಂಡಿತ ಈ ಬೆಕ್ಕಿಗೆ ಪೈಶಾಚ್ಯ ಬಡಿದಿದೆ ಎಂಬುದಾಗಿ ಆತ ಬೊಬ್ಬೆ ಹೊಡೆದ. ಆದರೆ ಮೇಸ್ತ್ರಿ ಈ ಆರೋಪವನ್ನು ಒಪ್ಪಲಿಲ್ಲ: ಹೌದು, ತನ್ನ ಮರಿಬೆಕ್ಕಿಗೆ ಪೈತ್ಯ ಬಡಿದಿರುವುದು ನಿಜ, ಜರ್ಮನಿಯನ್ನು ತೊರೆದು ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ ನಿರ್ಗಮಿಸಿದ ಐನ್‌ಸ್ಟೈನರಲ್ಲಿದ್ದ ತಾರತಮ್ಯ ಪ್ರಜ್ಞೆಯಂಥ ಪೈತ್ಯವದು ಎನ್ನುತ್ತ ಅದರ ಕೀರ್ತಿಯನ್ನು ಎತ್ತಿಹಿಡಿದ. ಫಲಿತಾಂಶವೇನು ಗೊತ್ತೇ? 'ಸಾಪೇಕ್ಷತೆ'ಗೂ 'ಸ್ವಪಕ್ಷತೆ'ಗೂ* ವ್ಯತ್ಯಾಸ ಅರಿಯದ ನಾವಿಕರು ಆ ಮರಿಬೆಕ್ಕನ್ನು 'ಪ್ರೊಫೆಸರ್ ಆಲ್ಬರ್ಟ್ ಐನ್‌ಸ್ಟೈನ್' ಎಂಬುದಾಗಿ ನಾಮಕರಣಗೈದರು.

೧೯೪೬ ಆಗಸ್ಟ್ ೧೦ರಂದು ಐನ್‌ಸ್ಟೈನ್ ಇಂಗ್ಲಿಷಿನಲ್ಲಿ ಈ ತೆರನಾಗಿ ಮಾರೋಲೆ ಬರೆದರು:

● ನೀವು ಕಳಿಸಿದ ಪ್ರೇಮಪುರಸ್ಸರ ಮತ್ತು ಕುತೂಹಲಕಾರಿ ಮಾಹಿತಿಗಾಗಿ ಧನ್ಯವಾದಗಳು. ನನ್ನ ಹೆಸರು ಹೊತ್ತವನಿಗೆ ನನ್ನ ಹಾಗೂ ನನ್ನ ಕಂಟಬೆಕ್ಕಿನ ಹಾರ್ದಿಕ ಶುಭಾಶಯಗಳು. ಈ ವರದಿ ನನ್ನ ಕಂಟಬೆಕ್ಕಿಗೆ ತುಂಬ ಖುಷಿ ಕೊಟ್ಟಿತು, ಕೊಂಚ ಕರುಬು ಕೂಡ! ಕರುಬಿಗೆ ಕಾರಣವೇನೆಂದರೆ ಖುದ್ದು ಇವನ ನಾಮಧೇಯ 'ಟೈಗರ್' ಎಂಬುದು, ನಿಮ್ಮವನ ನಾಮಧೇಯದಂತಲ್ಲದೆ, ಐನ್‌ಸ್ಟೈನ್ ಕುಟುಂಬದ ಜೊತೆ ನಿಕಟ ಬಾಂಧವ್ಯವೇನನ್ನೂ ವ್ಯಕ್ತಪಡಿಸುವುದಿಲ್ಲ.

*ಇಂಗ್ಲಿಷಿನಲ್ಲಿ relativity, kinship ಪದಗಳಿವೆ—ಕನ್ನಡಾನುವಾದಕ

ನಿಮಗೂ ನನ್ನ ಹೆಸರು ಹೊತ್ತವನ ಸಾಕುತಂದೆಯರಿಗೂ ಸ್ವತಃ ನನ್ನ ಹೆಸರಿನವನಿಗೂ ಪ್ರೀತಿಪೂರ್ವಕ ಶುಭಾಶಯಗಳ ಸಮೇತ.......

ಇಂಗ್ಲೆಂಡಿನಲ್ಲಿದ್ದ ಗಟ್ರೂಡ್ ವಾರ್ಶೋವರ್ ಎಂಬವರಿಗೆ ಐನ್‌ಸ್ಟೈನ್ ಪ್ರಿನ್‌ಸ್ಟನ್ನಿನಿಂದ ಕಳಿಸಿದ ಎರಡು ಪತ್ರಗಳನ್ನು ಇಲ್ಲಿ ಕೊಟ್ಟಿದೆ. ಈಕೆ ಬರ್ಲಿನ್ ರಬ್ಬಿಯೊಬ್ಬರ ವಿಧವೆ. ಒಂದರ ಬೆನ್ನಿಗೆ ಇನ್ನೊಂದರಂತೆ ಈ ಮಹಿಳೆ ಎರಡು ವರ್ಷ ಐನ್‌ಸ್ಟೈನರಿಗೆ ಕ್ರಿಸ್ಮಸ್ ಉಡುಗೊರೆಗಳನ್ನು ಕಳಿಸಿದ್ದರು. ಎರಡನೆಯ ಪತ್ರದಲ್ಲಿ ಉಲ್ಲೇಖಿಸಿರುವ ಇಂಗ್ಲಿಷ್ ವ್ಯಕ್ತಿ ಮೈಕೆಲ್ ಫ್ಯಾರಡೆ[76] ಬಗೆಗೆ ಒಂದು ಮಾತು : ಆತ ಸ್ವಾಧ್ಯಾಯ ನಿರತನಾಗಿ ಪ್ರಕಾಶಿಸಿದ ಮಹಾಪ್ರತಿಭಾವಂತ, ತುಂಬ ಒಲವಿನ ಸ್ವಭಾವದವ ಮತ್ತು ಪ್ರಾಯೋಗಿಕ ಭೌತವಿಜ್ಞಾನಿಯಾಗಿ ಸಾರ್ವಕಾಲಿಕ ಸರ್ವಶ್ರೇಷ್ಠ ವಿಜ್ಞಾನಿಗಳ ಪೈಕಿ ಒಬ್ಬ, ವಿದ್ಯುತ್ಕಾಂತ ಕ್ಷೇತ್ರದಲ್ಲಿ ಆತ ಮಾಡಿದ ಆವಿಷ್ಕಾರಗಳು ಮತ್ತು ಪ್ರವರ್ತಿಸಿದ ಕ್ರಾಂತಿಕಾರಕ ಭಾವನೆಗಳು ಸಾಪೇಕ್ಷತೆಯ ಅಭಿವರ್ಧನೆಗೆ ನಿರ್ಣಾಯಕಗಳಾಗಿದ್ದುವು. ಮೊದಲ ಕಾಗದದ ತಾರೀಕು ೨ ಜನವರಿ ೧೯೫೨:

ಪ್ರಿಯ ಗಟ್ರೂಡ್

ನೀವು ಕಳಿಸಿದ ನಿಸ್ಪೃಷ್ಟ ರೂಲುದೊಣ್ಣೆ ನನ್ನ ಮುಂದಿದೆ. ನಾನು ಉತ್ಪಾದಿಸಿದ ಒಂದು ವಸ್ತು ನೇರವಾಗಿದೆಯೋ ಡೊಂಕಾಗಿದೆಯೋ ಸಮಾಂತರವಾಗಿದೆಯೋ ಓರೆಯಾಗಿದೆಯೋ ಎಂಬುದನ್ನು ನಿರ್ಣಯಿಸುವ ಹೊಣೆ ಈ ತನಕ ಅಂತರ್ಬೋಧೆಯದಾಗಿತ್ತು. ದೇವತೆಗಳಿಗೆ ಶರಣು ಹೋಗುವುದನ್ನು ಸಾಧ್ಯವಾದರೆ ನಿವಾರಿಸುವುದು ನಿಮ್ಮ ಆಪೇಕ್ಷೆ ಎಂಬುದು ಈಗ ನನಗೆ ಹೊಳೆಯುತ್ತದೆ (ಈ ತೆರನಾಗಿ ನಾನು ಈ ರೂಲುದೊಣ್ಣೆಯನ್ನು ವ್ಯಾಖ್ಯಾನಿಸುತ್ತೇನೆ).

ಎರಡನೆಯ ಕಾಗದದ ತಾರೀಕು ೨೭ ಡಿಸೆಂಬರ್ ೧೯೫೨ :

ಫ್ಯಾರಡೆಯನ್ನು ಕುರಿತ ಕಿರುಹೊತ್ತಗೆ ಕಳಿಸಿ ನೀವು ನನಗೆ ಮಹದಾನಂದವಿತ್ತಿದ್ದೀರಿ. ದೂರದಲ್ಲಿರುವ ತನ್ನ ಪ್ರೇಮಪಾತ್ರಿಯನ್ನು ಪ್ರೇಮಿ ಪ್ರೀತಿಸುವಂತೆ ಆತ ಈ ವಿಚಿತ್ರ ಜಗತ್ತನ್ನು ಪ್ರೀತಿಸಿದ. ಕುಪ್ರತಿಷ್ಠೆಯಿಂದ ತಲೆಬೀಗುತ್ತ ವಕ್ರಚಷ್ಮಗಳ ಮೂಲಕ ಕ್ರೂರ ದೃಷ್ಟಿ ಬೀರುತ್ತ ಕಾವ್ಯಹಂತಕವಾಗಿರುವ ನಿರ್ಜೀವ ವಿಶೇಷೀಕರಣ ಆತನ ದಿನಗಳಲ್ಲಿರಲಿಲ್ಲ.

ಐನ್‌ಸ್ಟೈನರ ಪತ್ರಗಳ ನಡುವೆ ದೊರೆತ ಚೌಪದಿಯೊಂದರ ಅನುವಾದ ಇಲ್ಲಿದೆ. ಯಾವಾಗ ಅಥವಾ ಯಾವ ಸಂದರ್ಭದಲ್ಲಿ ಇದು ಬರೆಯಲಾಯಿತೆಂಬುದಕ್ಕೆ ಇದರಲ್ಲಿ ಸೂಚನೆ ದೊರೆಯುತ್ತಿಲ್ಲ. ಇದು ಈ ಮೊದಲು ಪ್ರಕಟವಾಗಿಲ್ಲವೆಂದೇ ತೋರುತ್ತದೆ :

● ನೋಟಕ್ಕೆ ಪುಟ್ಟಪದ 'ನಾವು'—ನಾನಿದನು ಶಂಕಿಸುವೆ ಕಾರಣ ಗೊತ್ತೆ?
ಇನ್ನೊಬ್ಬ ವ್ಯಕ್ತಿ ಎಂದೆಂದಿಗೂ 'ನಾನಾ'ಗಲಾರೆನಿದು ಚಿರಸತ್ತೆ
ನೇರವಲ್ಲವುದೇನೊ ಹುದುಗಿಹುದು ಸಂಬಲಾರೆನು ನಾನೊಡಂಬಡಿಕೆ
ತೋರ್ಕೆ ಒಪ್ಪಂದ ಒಗ್ಗಟ್ಟು ಮುಸುಕಿನ ಒಳಗೆ ಪಾತಾಳದಾಕಳಿಕೆ ! ●

ಈ ಮುಂದಿನದನ್ನು ಓದುವಾಗ ಎರಡು ಸಂಗತಿಗಳನ್ನು ಅರಿತಿರುವುದು ಅಪೇಕ್ಷಣೀಯ. ಮೊದಲನೆಯದು ಟಿಶಿಯನ್ ಎಂಬಾತ ಐದನೆಯ ಚಾರ್ಲ್ಸ್[77] ಚಕ್ರವರ್ತಿಯ ತಸ್ವೀರನ್ನು ಚಿತ್ರಿಸುತ್ತಿದ್ದಾಗ ಆತನ ಕೈಯಿಂದ ಬಣ್ಣದ ಕುಂಚ ಕೆಳಕ್ಕೆ ಬಿತ್ತು. ಚಕ್ರವರ್ತಿ ಅದನ್ನು ಶ್ರೀಮದ್ಗಾಂಭೀರ್ಯದಿಂದ ಎತ್ತಿ ಆತನಿಗೆ ಕೊಡುತ್ತ ಟಿಶಿಯನ್ ಸಾಕ್ಷಾತ್ ಚಕ್ರವರ್ತಿಯಿಂದಲೇ ಸೇವೆ ಪಡೆಯಲು ಅರ್ಹನಾಗಿದ್ದಾನೆ ಎಂದ. ಎರಡನೆಯದು, ಸೇಂಟ್ ಫ್ಲೋರಿಯನ್ ಎಂಬ ದೇವತೆ ಮಹಾಭಾಂಡವನ್ನು ಹಿಡಿದೊಯ್ಯುತ್ತಿರುವನೆಂದೂ ಅದರಿಂದ ಅಗ್ನಿಜ್ವಾಲೆಗಳನ್ನೇ ಮೊಗೆಯುತ್ತಿರುವನೆಂದೂ ಅನೇಕ ವೇಳೆ ಬಣ್ಣಿಸುವುದುಂಟು. ಎಂದೇ ಅಗ್ನಿಗೆ ಎದುರಾಗಿ ರಕ್ಷಣೆ ಬೇಕಾದಾಗ ಆತನ ಅನುಗ್ರಹವನ್ನು ಯಾಚಿಸುವುದು ವಾಡಿಕೆ ಆಗಿತ್ತು. ಆದರೆ ತಮ್ಮ ಕಾಗದದಲ್ಲಿ ಬರೆದಿರುವ ಮರೆತ ಮಾತಿನಲ್ಲಿ ಐನ್‌ಸ್ಟೈನ್ ಬಳಸಿರುವ ಪದಪುಂಜ ಜರ್ಮನ್ ಭಾಷೆಯಲ್ಲಿರುವ ಒಂದು ಜಾಣ ನುಡಿಕಟ್ಟು. ಹಲವು ಬಗೆಗಳ ದುರಂತಗಳನ್ನು ವರ್ಣಿಸಬೇಕಾಗುವಾಗ ಇದನ್ನು ಉಲ್ಲೇಖಿಸುವುದುಂಟು.

ವಿಖ್ಯಾತ ಜರ್ಮನ್ ಲೇಖಕನೊಬ್ಬ ಪ್ರಖ್ಯಾತ ವ್ಯಕ್ತಿಗಳ ತಸ್ವೀರುಗಳನ್ನು ರೇಖಿಸುವುದರಲ್ಲಿ ಉದ್ಯುಕ್ತನಾಗಿದ್ದ. ಇವನ್ನೆಲ್ಲ ಸಂಕಲಿಸಿ ಒಂದು ಪುಸ್ತಕದಲ್ಲಿ ಪ್ರಕಟಿಸುವುದು ಅವನ ಉದ್ದೇಶ. ಅದೇ ಆಗ ತಾನೇ ಅವನಿಗೆ ಅಮೆರಿಕದ ಒಂದು ನಿಯತಕಾಲಿಕೆಯಿಂದ ಐನ್‌ಸ್ಟೈನರ ತಸ್ವೀರನ್ನು ತಯಾರಿಸಿ ಕಳಿಸಲು ಹೊರಜಿಸಂದೇಶ ಬಂದಿತ್ತು. ನಿಯತಕಾಲಿಕೆಯಲ್ಲಿ ತಸ್ವೀರು ಪ್ರಕಟವಾದ ಬಳಿಕ ಇದನ್ನು ತನ್ನ ಪುಸ್ತಕದಲ್ಲಿ ಮುದ್ರಿಸ

ಬೇಕೆಂಬುದು ಅವನ ಯೋಜನೆ. ತದನುಸಾರವಾಗಿ ಅವನು ಬರ್ಲಿನ್ನಿನಲ್ಲಿದ್ದ ಐನ್‌ಸ್ಟೈನರಿಗೆ ೧೯೩೧ ನವೆಂಬರ್ ೧೨ರಂದು ಮನವೊಲಿಸುವ ಒಂದು ಕಾಗದ ಬರೆದು ತಾನು ಕುಂಚಿಸಬೇಕೆಂದಿರುವ ತಸ್ವೀರಿಗೆ ಅವರು ಭಂಗಿ ಒಡ್ಡಲು ಒಪ್ಪಿಗೆ ನೀಡಬಹುದೇ ಎಂದು ಕೋರಿದ್ದ. ತಾನು ರಾಜಕಾರಣಿಗಳನ್ನು ಸಂಪರ್ಕಿಸಿದಾಗ ಅವರು ಒಡನೆ ಸಮ್ಮತಿಸುತ್ತಿದ್ದರು. ಕಾರಣ, ಅವರಿಗೆ ಪ್ರಚಾರ ಅಗತ್ಯವಾಗಿತ್ತು. ಆದರೆ ಐನ್‌ಸ್ಟೈನರ ಪ್ರವೃತ್ತಿ ಇದಲ್ಲವೆಂದು ತನಗೆ ಚೆನ್ನಾಗಿ ತಿಳಿದಿತ್ತೆಂಬುದಾಗಿ ವಿವರಿಸಿದ್ದ. ಐದನೆಯ ಚಾರ್ಲ್ಸ್ ಚಕ್ರವರ್ತಿ ಕೂಡ ಟೆಶಿಯನ್ನನಿಗೆ ಕೆಲವು ಭಂಗಿಗಳನ್ನು ಪ್ರದರ್ಶಿಸಿದ್ದ ಎಂದು ತಿಳಿಸುತ್ತ, ಉಭಯ ಪಕ್ಷಗಳ ಘನತೆಯ ದಾವಾಪಷೆಗಳು ವಿಭಿನ್ನವಾಗಿರುವುದರಿಂದ, ಐನ್‌ಸ್ಟೈನ್ ವರ್ಣಕುಂಚವನ್ನು ಎತ್ತಿಕೊಡಬೇಕೆಂದು ತಾನು ಅಪೇಕ್ಷಿಸುವುದಿಲ್ಲವಾಗಿ ಮಾತು ಕೊಟ್ಟ.

೧೯೩೧ ನವೆಂಬರ್ ೧೭ರಂದು ಐನ್‌ಸ್ಟೈನ್ ಈ ತೆರನಾಗಿ ಉತ್ತರ ಇತ್ತರು :

● ಪ್ರತಿಯೊಬ್ಬ ರಾಮಿ ನಾಣಿ ಮತ್ತು ಶೀನ ಕೇವಲ ೧೪ ಪೈಸಾ ಬಿಸಾಡಿ ಪಡೆಯಬಹುದಾಗಿದ್ದಂಥ ಪೋಸ್ಟ್‌ಕಾರ್ಡ್ ಗಾತ್ರದ ಚಿತ್ರವನ್ನು ಟೆಶಿಯನ್ ಕುಂಚಿಸಿದ್ದಾಗಿದ್ದರೆ ಐದನೆಯ ಚಾರ್ಲ್ಸ್ ಚಕ್ರವರ್ತಿ ಆದರ ಬಗ್ಗೆ ಅಷ್ಟೊಂದು ಉತ್ಸಾಹಿ ಆಗಿರುತ್ತಿದ್ದನೆಂದು ನೀವು ನಿಜವಾಗಿಯೂ ನಂಬುತ್ತೀರಾ ? ನನ್ನ ಊಹೆ ಇದು : ಚಕ್ರವರ್ತಿ ಆ ವರ್ಣಕುಂಚವನ್ನು ಲವಲೇಶವೂ ಕಡಿಮೆ ಅಲ್ಲದ ಸಂತೋಷದಿಂದ ಹೆಕ್ಕಿ ಟೆಶಿಯನ್ನನಿಗೆ ಒಪ್ಪಿಸಿರುತ್ತಿದ್ದ ; ಆದರೆ ಖಾತ್ರಿ ಇಂಥ ಯಾವುದೇ ಪ್ರಚಾರದಿಂದ ತನ್ನನ್ನು, ಕನಿಷ್ಠಪಕ್ಷ ತನ್ನ ಜೀವಿತಾವಧಿಯಲ್ಲಾದರೂ, ವಿಮುಕ್ತನನ್ನಾಗಿಸಬೇಕೆಂದು ಪ್ರಾರ್ಥಿಸಿರುತ್ತಿದ್ದ.

ಆದ್ದರಿಂದ, ನಾನು ಸಹ ಅದೇ ತೆರನಾಗಿ ಯೋಚಿಸಿದುದಾದರೆ, ದಯ ಮಾಡಿ, ನನ್ನ ಮೇಲೆ ಸಿಟ್ಟಾಗಬೇಡಿ. ಇದೂ ಅಲ್ಲದೆ ಮುಂದಿನ ಕೆಲವೇ ದಿನಗಳಲ್ಲಿ ನಾನು ಕ್ಯಾಲಿಫೋರ್ನಿಯಕ್ಕೆ ತೆರಳಬೇಕಾಗಿದೆ. ಹೀಗಾಗಿ ನನ್ನ ಕೈಗಳು ಭರ್ತಿ ಆಗಿವೆ....

ಮ. ಮಾ. ಎಲೈ ಸೇಂಟ್ ಫ್ಲೋರಿಯನ್ ! ನನ್ನ ಮನೆಯನ್ನು ಕಾಪಾಡು. ಬೇರೊಬ್ಬನದನ್ನು ಸುಡು ! ●

ಬರ್ನ್ ನಗರದಲ್ಲಿಯ ಏಕಸ್ವ ಕಛೇರಿಯಲ್ಲಿ ಐನ್‌ಸ್ಟೈನ್ ಕೆಲಸ ಮಾಡುತ್ತಿದ್ದಾಗ ಅವರು ಪರಿಕಲ್ಪಿಸಿ ರೂಪಿಸಿದ ವಿಶೇಷ ಸಾಪೇಕ್ಷತಾ ಸಿದ್ಧಾಂತದ ಐವತ್ತನೆಯ ವಾರ್ಷಿಕೋತ್ಸವವನ್ನು ಆ ನಗರದಲ್ಲಿ ಆಚರಿಸುವ (೧೯೫೫) ಸಲುವಾಗಿ ವೈಜ್ಞಾನಿಕ ಸಮ್ಮೇಳನವನ್ನು ಯೋಜಿಸಲಾಗಿತ್ತು. ಐನ್‌ಸ್ಟೈನ್ ಆ ಸಮಾರಂಭಕ್ಕೆ ಗೌರವಾನ್ವಿತ ಅತಿಥಿಯಾಗಿ ಆಗಮಿಸಬೇಕೆಂದು ಇವರ ಮಿತ್ರರಾದ ಮ್ಯಾಕ್ಸ್ ಫಾನ್ ಲವೇ ಕರೆಯೋಲೆ ಕಳಿಸಿದರು. ಆದರೆ ಈ ವೇಳೆಗೆ ಐನ್‌ಸ್ಟೈನ್ ಎಪ್ಪತ್ತರ ನಡುವಿನಲ್ಲಿದ್ದರು. ಸಾವು ಅವರತ್ತ ಕುಡಿನೋಟ ಬೀರಿತ್ತು. ಲವೇಯವರಿಗೆ ಐನ್‌ಸ್ಟೈನ್ ೧೯೫೫ ಫೆಬ್ರುವರಿಯಲ್ಲಿ ಹೀಗೆ ಬರೆದರು :

● ವೃದ್ಧಾಪ್ಯ ಮತ್ತು ಅನಾರೋಗ್ಯಗಳ ಕಾರಣವಾಗಿ ಇಂಥ ಸಮಾರಂಭಗಳಲ್ಲಿ ಭಾಗವಹಿಸುವುದು ಅಸಾಧ್ಯವಾಗಿದೆ. ಈ ದೈವ ನಿಯಮ ಒಂದು ತೆರದಲ್ಲಿ ನನಗೆ ವಿಮೋಚನಕಾರಿಯಾಗಿದೆ ಎಂದು ನಾನು ಒಪ್ಪಲೇಬೇಕು. ಏಕೆಂದರೆ ವ್ಯಕ್ತಿಪಂಥದೊಡನೆ ಒಂದಿಷ್ಟಾದರೂ ಸಂಬಂಧವಿರುವಂಥ ಪ್ರತಿಯೊಂದೂ ನನಗೆ ವೇದನೆಯ ಸಂಗತಿ. ●

ಕಲಾವಿದ ಮಿತ್ರನೊಬ್ಬನಿಗೆ ೧೯೪೯ ಡಿಸೆಂಬರ್ ೨೭ರಂದು ಬರೆದ ಕಾಗದದಿಂದ ಈ ಮುಂದಿನದನ್ನು ಆಯ್ದಿದೆ :

● ಒಬ್ಬಾತ ತನ್ನ ಕೆಲಸವನ್ನು ಅಷ್ಟೊಂದು ಹನುಮಂತನಿಷ್ಠೆಯಿಂದ ಏಕೆ ತೆಗೆದುಕೊಳ್ಳುವನೆಂಬುದು ನಿಜಕ್ಕೂ ಬಿಡಿಸಲಾಗದ ಒಗಟು. ಯಾರಿಗಾಗಿ? ಸ್ವಂತಕ್ಕಾಗಿ ? —ಹೇಗಿದ್ದರೂ ಆತ ಅತಿ ಶೀಘ್ರವಾಗಿ ನಿರ್ಗಮಿಸಿರುತ್ತಾನೆ. ಆತನ ಸಮಕಾಲೀನರಿಗಾಗಿ ? ಭವಿಷ್ಯಪೀಳಿಗೆಗಾಗಿ ? ಇಲ್ಲ, ಇದು ಒಗಟಾಗಿಯೇ ಉಳಿಯುತ್ತದೆ. ●

ಐನ್‌ಸ್ಟೈನರ ಐವತ್ತನೆಯ ಹುಟ್ಟುಹಬ್ಬ, ೧೪ ಮಾರ್ಚ್ ೧೯೨೯, ಮಹತ್ತರವಾದ ಒಂದು ಘಟನೆ: ಅಂದು ಅವರಲ್ಲಿಗೆ ಪ್ರಪಂಚದ ಎಲ್ಲೆಡೆಗಳಿಂದಲೂ ಉಡುಗೊರೆಗಳ ಮತ್ತು ಅಭಿನಂದನ ಸಂದೇಶಗಳ ಹಿರಿಹೊನಲೇ ಹರಿದುಬಂದಿತು. ಎಲ್ಲ ಬಗೆಯ ವರದಿಗಾರರೂ ಅವರ ಸಂದರ್ಶನ ಬೇಡಿ ಬಂದಿದ್ದರು. ಇಂಥ ಒಂದು ಘೋರ ವಿಪತ್ತು ತಮಗೆ ಕಾದಿದೆ ಎಂಬುದನ್ನು ಮುಂದಾಗಿಯೇ ಊಹಿಸಿದ್ದ ಐನ್‌ಸ್ಟೈನ್ ಅಂದು ತಮ್ಮ ಬರ್ಲಿನ್ ನಿವಾಸದಿಂದ ತಲೆಮರೆಸಿಕೊಂಡಿದ್ದರು. ಇವೆಲ್ಲ ಅವಾಂತರಗಳೂ ಮುಗಿದ ಬಳಿಕ ಅವರು ತಮಗೆ ಜನ್ಮದಿನ ಶುಭಾಶಯ ಸಲ್ಲಿಸಿದ್ದ ಅನೇಕ ಮಿತ್ರರಿಗೆ ಧನ್ಯವಾದ ಕಳಿಸುವ ಸಮಸ್ಯೆಯನ್ನು ಎದುರಿಸಬೇಕಾಯಿತು. ಅವರಿದಕ್ಕೆ ಪರಿಹಾರವನ್ನು ಅಂತ್ಯಪ್ರಾಸವಿರುವ ಕಗ್ಗ ನೇಯುವುದರಲ್ಲಿ ಕಂಡುಕೊಂಡರು. ಒಬ್ಬ ಮುದ್ರಕನ ನೆರವಿನಿಂದ ತಮ್ಮ ಹಸ್ತಪ್ರತಿಯ ನಕಲುಗಳನ್ನು ತದ್ವತ್ತಾಗಿ ತಯಾರಿಸಿ ಅವನ್ನು ಸ್ನೇಹಿತರಿಗೆ ರವಾನಿಸಿದರು. ಬಹುತೇಕ ಸಂದರ್ಭಗಳಲ್ಲಿ ವೈಯಕ್ತಿಕ ಶುಭಾಶಯಗಳನ್ನು ಕೂಡ ಸೇರಿಸಿದುದಿತ್ತು. ಕಗ್ಗದ ಅನುವಾದವನ್ನಿಲ್ಲಿ ಕೊಟ್ಟಿದೆ:

● ಕಳಿಸಿಹರೆಲ್ಲರು ನನಗೆ ಶುಭಾಶಯ-
ವೀದಿನ—ಸಲುಮೆಯ ಒಲುಮೆಯ ಪ್ರೀತಿಯ.
ಸನಿಹದ ದೂರದ ಬಂಧು ಬಾಂಧವರ
ಮನವರಳಿಪ ನಲ್ನುಡಿ ಅತಿ ಬಂಧುರ !
ಉಡುಗೊರೆಗಳ ಹಿರಿ ಹಿಂಡೇ ಹಿಂಡು—
ರಸಿಕನ ಜಿಹ್ವೆಗೆ ಅಮೃತದ ಹುಂಡು !
ಪ್ರಸನ್ನಗೊಳಿಸಲು ಮುದುಕನ ಮನವನು
ನಿವೇದಿಸಿಹರೈ ತನುಮನಧನವನು
ಸುಮಧುರ ಮೇಳಸ್ವನದಿಂ ದಿನವನು
ಹಸುಪದ ಹೊನಲಿಗೆ ಕೆಡೆವಿಹರೆನ್ನನು
ಅಲೆಮಾರಿ ಭಿಕಾರಿಗಳವರಸುಯಾ-
ಯಿಗಳೂ ಪಾಡ್ದರು ಕೂಡಿಸಿ ದನಿಯಾ !
ಗಗನದೊಳಡರಿದ ಜಟಾಯುವಂದದಿ
ಲಘುವಾಗಿಹೆ ನಾನತ್ಯಾನಂದದಿ
ಸುದೀರ್ಘ ದಿನ ಕೊನೆಗಳಿಗೆಗೆಬಂದಿದೆ

ಶುಭಾಶಯ ನಿಮಗೆನ್ನಿಂ ಸಂದಿದೆ
ನೀವೆನಗೆರೆದುಪಚಾರವ ಕಂಡನ್
ಚಂದದ ನೇಸರ್—ಹೂನಗು ಕರೆದನ್ !

ಎ. ಐನ್‌ಸ್ಟೈನ್*
ಪೆಕ್ಕಾವಿಟ್, ೧೪ ಮಾರ್ಚ್ ೧೯೨೯

ಐನ್‌ಸ್ಟೈನರ ಐವತ್ತನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರಿಗೆ ಬಂದ ಕಾಗದಗಳ ಪೈಕಿ ನೊಬೆಲ್ ಪ್ರಶಸ್ತಿವಿಜೇತ ಫ್ರಿಟ್ಝ್ ಹೇಬರರದೂ ಸೇರಿತ್ತು. ಅದರ ಉದ್ಧರಣೆ :

"ಇಂದಿನಿಂದ ಶತಮಾನಗಳು ಉರುಳಿದ ತರುವಾಯ ಹಾದಿಹೋಕನೊಬ್ಬ ನಮ್ಮ ಕಾಲವನ್ನು [ಒಂದನೆಯ] ಮಹಾಯುದ್ಧದ ಅವಧಿ ಎಂಬುದಾಗಿ ತಿಳಿದರೆ ಸುಶಿಕ್ಷಿತ ಜನ ನಮ್ಮ ಶತಮಾನದ ಪ್ರಥಮ ಪಾದವನ್ನು ನಿಮ್ಮ ಹೆಸರಿನೊಂದಿಗೆ ಹೊಂದಿಸುತ್ತಾರೆ—ಹೇಗೆ ಹದಿನೇಳನೆಯ ಶತಮಾನದ ಅಂತ್ಯವನ್ನು ಇಂದು ಕೆಲವರು ಹದಿನಾಲ್ಕನೆಯ ಲೂಯಿಯ ಕಾಳೆಗಗಳ ಕಾಲವೆಂದು ಭಾವಿಸಿದರೆ ಇತರರು ನ್ಯೂಟನ್‌ಅವರ ಅವಧಿ ಎಂದು ಪರಿಗಣಿಸುತ್ತಾರೋ ಹಾಗೆ."

ಒಂದು ದಶಕದ ತರುವಾಯ ಐನ್‌ಸ್ಟೈನರ ಷಷ್ಟ್ಯಬ್ದಿ ಸಮಾರಂಭಕ್ಕಾಗಿ ಇವರ ಆಪ್ತಮಿತ್ರ ಮತ್ತು ನೊಬೆಲ್ ಪಾರಿತೋಷಿಕವಿಜೇತ ಮ್ಯಾಕ್ಸ್ ಫಾನ್ ಲವೇ, ಈ ಮುಂದಿನದನ್ನು ಕಳಿಸಿದರು. ಈ ವೇಳೆಗೆ ಐನ್‌ಸ್ಟೈನ್ ಪ್ರಿನ್‌ಸ್ಟನ್ನಿನಲ್ಲಿದ್ದರು :

"....ನಿಜಕ್ಕೂ ನೀವೀಗ ಸುರಕ್ಷಿತರೂ ಆ ವಿದ್ವೇಷಕ್ಕೆ ಎಟುಕದವರೂ ಆಗಿರುವಿರಿ. ನಾನು ನಿಮ್ಮನ್ನು ತಿಳಿದಿರುವಂತೆ, ನಿಮ್ಮ ಅಂತರ್ಯದಲ್ಲಿ ನೀವು ಅದರ ಜೊತೆ ಒಂದು ಒಡಂಬಡಿಕೆ ಸಾಧಿಸಿಕೊಂಡು ನಿಮ್ಮ ವಿಧಿಯನ್ನು ಮೀರಿ ನಿಂತಿದ್ದೀರಿ. ಆದರೆ ಇದೆಲ್ಲದಕ್ಕಿಂತ ಮಿಗಿಲಾದದ್ದೆಂದರೆ ನಿಮ್ಮ ಕೃತಿ

---

* ಕಲಾವಿದರು ತೈಲಪಟಗಳಲ್ಲಿ fecit (ಲ್ಯಾಟಿನ್ನಿನಲ್ಲಿ ಇದರ ಅರ್ಥ "ಅವನು ಇದನ್ನು ಮಾಡಿದ") ಎಂಬ ಪದವನ್ನು ಬರೆದು ಬಳಿಕ ತಾರೀಕಿನ ಸಮೇತ ತಮ್ಮ ಹೆಸರನ್ನು ಬರೆಯುತ್ತಿದ್ದರು. ಇಲ್ಲಿ ಐನ್‌ಸ್ಟೈನ್ Peccavit ಎಂಬ ಪದವನ್ನು ಬಳಸಿದ್ದಾರೆ. ಲ್ಯಾಟಿನ್ನಿನಲ್ಲಿ ಇದರ ಅರ್ಥ 'ಅವನು [ಇದರ] ಅಪರಾಧಿ.'

ಯಾವುದೇ ಬಗೆಯ ರಾಗದ್ವೇಷಕ್ಕೆ ನಿಲುಕದಿರುವುದು ಮತ್ತು ನಿಲುಕದೆ ಉಳಿದಿರುವುದು. ಈ ಭೂಮಿಯಲ್ಲಿ ನಾಗರಿಕ ಸಮುದಾಯ ಉಳಿದಿರುವ ತನಕವೂ ಅದು ಭದ್ರವಾಗಿರುವುದು."

ಅಮೆರಿಕದ ಒಬ್ಬ ಪ್ರಮುಖ ಪ್ರಕಾಶಕ ೧೯೩೭ ಮೇ ೧ರಂದು ಐನ್‌ಸ್ಟೈನರಿಗೊಂದು ಪ್ರಾರ್ಥನಪತ್ರ ಸಲ್ಲಿಸಿದ. ಅವನ ಗ್ರಾಮನಿವಾಸದಲ್ಲಿ ಗ್ರಂಥಾಲಯ ವಿಭಾಗವೊಂದರ ಸ್ಥಾಪನೆಗಾಗಿ ಆದಾಗ ತಾನೇ ಅವನು ಬುನಾದಿ ಹಾಕಿದ್ದ. ಆ ಕಟ್ಟಡದ ಮೂಲೆಗಲ್ಲಿನಲ್ಲಿ, ಭವಿಷ್ಯದ ಪೀಳಿಗೆಗಳ ಪ್ರಯೋಜನಾರ್ಥ, ಪುರಾತತ್ವ ಆಸಕ್ತಿಯ ಬಾಬುಗಳನ್ನು ಒಳಗೊಂಡಿರುವ ವಾಯುಬಂಧ ಲೋಹಕರಂಡವೊಂದನ್ನು ಇರಿಸಬೇಕೆಂಬುದು ಅವನ ಆಶಯ. ಉದಾಹರಣೆಗೆ ಸುದೀರ್ಘಕಾಲ ತಾಳಿಕೆ ಇರುವಂತೆ ಬಟ್ಟೆ ಚಿಂದಿಗಳಿಂದ ತಯಾರಿಸಿದ ಕಾಗದದ ಮೇಲೆ ವಿಶೇಷವಾಗಿ ಮುದ್ರಿಸಿದ *New York Times*ನ ಒಂದು ಪ್ರತಿ ಅದರೊಳಗೆ ಇರುತ್ತದೆ. ಐನ್‌ಸ್ಟೈನ್ ಒಂದು ಸಂದೇಶ ನೀಡಬೇಕೆಂದು ಆತ ಕೋರಿ, ಅವರ ಬರವಣಿಗೆಗೋಸ್ಕರ, ಚಿಂದಿಗಂಟಿನಿಂದ ತಯಾರಿಸಿದ ಕೂಪನ್ ಬಾಂಡ್ ಕಾಗದದ ಒಂದು ಹಾಳೆಯನ್ನು ಲಗತ್ತಿಸಿದ್ದ. ಆ ಕಾಗದ ಒಂದು ಸಾವಿರ ವರ್ಷ ಉಳಿದಿರಬಲ್ಲುದೆಂದು ಆತ ಐನ್‌ಸ್ಟೈನರಿಗೆ ಆಶ್ವಾಸನೆ ನೀಡಿದ್ದ.

೧೯೩೭ ಮೇ ೪ರಂದು ಐನ್‌ಸ್ಟೈನ್ ಈ ಮುಂದಿನ ಸಂದೇಶವನ್ನು, ಸುದೀರ್ಘಕಾಲ ಉಳಿಯಬಲ್ಲ ಆ ವಿಶೇಷ ಕಾಗದದ ಮೇಲೆ, ಪ್ರಾಯಶಃ ಬೆರಳಚ್ಚಿಸಿ ರವಾನಿಸಿದರು :

● ಪ್ರಿಯ ಭವಿಷ್ಯವೇ

ನೀನು ನಮಗಿಂತ (ಅಥವಾ ನಾವಿದ್ದುದಕ್ಕಿಂತ) ಅಧಿಕ ನ್ಯಾಯಶೀಲ, ಶಾಂತಿಶೀಲ ಮತ್ತು ಸಾರ್ವತ್ರಿಕವಾಗಿ ಅಧಿಕ ತರ್ಕಶೀಲ ಆಗದಿದ್ದರೆ ಖಾತ್ರಿ ಮಸಣ ಕಾಳಿಗೆ ಕೂಳಾಗಿ ಹಾಳಾಗಿಹೋಗುವೆ.

ಶ್ರದ್ಧಾಪೂರ್ವಕವಾದ ಈ ಹಂಬಲಕ್ಕೆ ಸಕಲ ಗೌರವ ಸಮೇತ ಲಿಖಿತ ರೂಪ ಕೊಟ್ಟಿರುವ

ನಾನು ಆಗಿದ್ದೇನೆ (ಅಥವಾ ಆಗಿದ್ದೆ)

ನಿನ್ನ

ಆಲ್ಬರ್ಟ್ ಐನ್‌ಸ್ಟೈನ್ ●

ಒಬ್ಬ ಪತ್ರಕರ್ತ ಐನ್‌ಸ್ಟೈನರಿಗೆ ಎರಡು ಪ್ರಶ್ನೆ ಹಾಕಿದ. ಮೊದಲನೆಯದು, ಊಹನಾತ್ಮಕ ತತ್ತ್ವಶಾಸ್ತ್ರವೆಂದು ಹೆಸರಿರುವ ಶಾಸ್ತ್ರದಿಂದ ಐನ್‌ಸ್ಟೈನ್ ಏನನ್ನಾದರೂ ಪಡೆದಿದ್ದರೇ ? ಎರಡನೆಯದು, ಕೊಂಚ ಅಡ್ಡಾದಿಡ್ಡಿಯಾಗಿತ್ತು : ಆಕಾಶ, ಕಾಲ, ಕಾರಣತೆ, ವಿಶ್ವದ ಎಲ್ಲೆಗಳು, ಆದಿ ಮತ್ತು ಅಂತ್ಯ ಇವನ್ನು ಕುರಿತಂತೆ ವರ್ತಮಾನ ದಿನಗಳಲ್ಲಿ ನಡೆಯುತ್ತಿರುವ ಭೌತ ಸಂಶೋಧನೆಗಳ ಫಲವಾಗಿ ಈ 'ವಿಜ್ಞಾನ'—ಅಂದರೆ ಊಹನಾತ್ಮಕ ತತ್ತ್ವ ಶಾಸ್ತ್ರ—ನಿರುದ್ಯೋಗಿ ಆಗಿಹೋಗಿದೆ ಎಂದು ಕೂಡ ಐನ್‌ಸ್ಟೈನ್ ಭಾವಿಸಿರುವರೇ ? ಅಥವಾ ವಿಜ್ಞಾನಿ ಆರ್. ಸಿ. ಟಾಲ್‌ಮನ್ ಅವರ ಬರವಣಿಗೆಯಿಂದ ಉದ್ಧರಿಸುತ್ತ 'ಅದೇ ಉದ್ದೇಶಕ್ಕೆಂದು ವಿಶೇಷವಾಗಿ ಉಪಜ್ಞಿಸಲಾದ ಪದಾವಳಿಯ ವ್ಯವಸ್ಥಿತ ದುರುಪಯೋಗವೇ ತತ್ತ್ವಶಾಸ್ತ್ರ' ಎಂಬುದನ್ನು ಐನ್‌ಸ್ಟೈನ್ ಒಪ್ಪಿರುವರೇ ಎಂದು ಕೇಳಿದ.

೧೯೩೨ ಸೆಪ್ಟೆಂಬರ್ ೨೮ರಂದು ಐನ್‌ಸ್ಟೈನ್ ಬರ್ಲಿನ್ನಿನಿಂದ ಈ ಮುಂದಿನಂತೆ ಪ್ರತಿಕ್ರಿಯೆ ವ್ಯಕ್ತಪಡಿಸಿದರು :

● ತತ್ತ್ವಶಾಸ್ತ್ರ ಇತರ ಎಲ್ಲ ಶಾಸ್ತ್ರಗಳಿಗೂ ಜನ್ಮವಿತ್ತು ಅವನ್ನು ಸಂಪನ್ನಗೊಳಿಸಿದ ತಾಯಿಯಂತೆ. ಎಂದೇ ಆಕೆಯ ನಗ್ನತೆಯನ್ನಾಗಲಿ ರಿಕ್ತತೆಯನ್ನಾಗಲಿ ಯಾರೂ ತೃಣೀಕರಿಸಕೂಡದು. ಅವಳ ಡಾನ್ ಕ್ವಿಕ್ಸೋಟ್[79] ಆದರ್ಶದ ಒಂದು ಅಂಶ ಅವಳ ಮಕ್ಕಳಲ್ಲಿ ಮುಂದುವರಿಯುತ್ತಿದ್ದು ಶುಷ್ಕತರ್ಕದ ಗೊಪರಿನಲ್ಲಿ ಅವರು ಹುಗಿದುಹೋಗಲಾರದಂತೆ ಎಚ್ಚರವಾಗಿರುವುದೆಂದು ಆಶಿಸಬೇಕು. ●

ಐನ್‌ಸ್ಟೈನರ ಬಗೆಗಿನ ವಸ್ತು ಮತ್ತು ವಿಷಯಗಳನ್ನು ಆಲ್ಬರ್ಟ್ ಐನ್‌ಸ್ಟೈನ್ ಅವರ ಎಸ್ಟೇಟ್ ಸ್ವಾಗತಿಸುವುದೆಂಬ ಸಂಗತಿ ಅರಿತ ಒಬ್ಬ ಪತ್ರಕರ್ತ, ೧೯೫೭ರಲ್ಲಿ, ಅದೇ ಏಳು ವರ್ಷಗಳ ಹಿಂದೆ ತಾನು ಹಮ್ಮಿಕೊಂಡಿದ್ದ 'ಕೊನೆಯ ಎರಡು ನಿಮಿಷಗಳನ್ನು ಹೇಗೆ ಕಳೆಯುವೆನು' ಎಂಬ ದೂರದರ್ಶನ ಕಾರ್ಯಕ್ರಮದ ಬಗ್ಗೆ ಪ್ರಸ್ತಾವಿಸಿದ್ದ. ಭೇಟಿಮಾಡಲ್ಪಡುವ ಪ್ರತಿಯೊಬ್ಬ ವ್ಯಕ್ತಿಯೂ ಈ ಎರಡು ನಿಮಿಷಗಳೆಂದರೆ ಆತನ ಸಾವಿಗೆ ಆದೇ ಮೊದಲು ಮಿಡಿಯುವ ಎರಡು ನಿಮಿಷಗಳೆಂಬುದನ್ನು ಗ್ರಹಿಸಿರುತ್ತಾನೆಂಬುದು ಇಲ್ಲಿಯ ಇಂಗಿತಾರ್ಥ. ಎಲಿನಾರ್ ರೂಸ್ವೆಲ್ಟ್[80] ಮತ್ತು ಆಲ್ಬರ್ಟ್ ಶ್ವೈಟ್ಜರ್[81] ಇವರಂಥ ಪ್ರತಿಷ್ಠಿತ ವ್ಯಕ್ತಿಗಳನ್ನು ಸಂಪರ್ಕಿಸುವ ಉದ್ದೇಶ

ಇರಿಸಿಕೊಂಡಿದ್ದ ಆ ಪತ್ರಕರ್ತ ಐನ್‌ಸ್ಟೈನ್‌ರಿಗೂ ಆಮಂತ್ರಣ ಕಳಿಸಿದ. ಈ ಶೀರ್ಷಿಕೆ ಏನೋ ತುಂಬ ಸೊಗಸಾಗಿದೆ—ಆದರೆ ಮೊದಲ ನೋಟಕ್ಕೆ ಮಾತ್ರ. ಐನ್‌ಸ್ಟೈನ್ ಇದನ್ನು ಇನ್ನೂ ಆಳವಾಗಿ ನೋಡಿದರು. ಇವರು ಇಂಗ್ಲಿಷಿನಲ್ಲಿ ಬರೆದ ಮಾರೋಲೆ ಇಲ್ಲಿದೆ, ತಾರೀಕು ೨೬ ಆಗಸ್ಟ್ ೧೯೫೦ :

● "ಕೊನೆಯ ಎರಡು ನಿಮಿಷಗಳು" ಎಂಬ ನಿಮ್ಮ ಯೋಜಿತ ದೂರ ದರ್ಶನ ಪ್ರಸಾರದಲ್ಲಿ ಭಾಗವಹಿಸುವುದು ನನಗೆ ಸಾಧ್ಯವಾಗದೆನ್ನಿಸುತ್ತದೆ. ಜನ ತಮ್ಮ ಅಂತಿಮ ಮುಕ್ತಿಗೆ ಅದೇ ಹಿಂದಿನ ಎರಡು ನಿಮಿಷಗಳನ್ನು ಹೇಗೆ ವಿನಿಯೋಗಿಸಲಿರುವರೆಂಬ ಸಂಗತಿ ಅಷ್ಟೇನೂ ಉಚಿತವಾದುದಲ್ಲವೆಂದು ನನ್ನ ಭಾವನೆ. ●

ಇದನ್ನು ಪ್ರಸ್ತಾವಿಸುತ್ತ ಆ ಪತ್ರಕರ್ತ ಮುಂದಿನ ಷರಾವನ್ನು ಸೇರಿಸಿದ: 'ಇದು ನನ್ನ ಬಯಕೆನ್ನೇ ಗಮನಾರ್ಹವಾಗಿ ಬದಲಾಯಿಸಿಬಿಟ್ಟಿತೆಂಬುದನ್ನು ಹೇಳಬೇಕಾಗಿಲ್ಲವಷ್ಟೆ.'

ಉಡುಗೆ ತೊಡಿಗೆಗಳ ವಿಚಾರದಲ್ಲಿ ಐನ್‌ಸ್ಟೈನರದು ಘೋರ ನಿರ್ಲಕ್ಷ್ಯ. ಬಹುತೇಕ ಅವು ದೊಗಲೆಯೇ. ನ್ಯೂಯಾರ್ಕ್ ರಾಜ್ಯದ ಪ್ರಾಥಮಿಕ ಶಾಲೆಯೊಂದರ ಐದನೆಯ ತರಗತಿಯ ಪುಟಾಣಿಗಳಿಗೆ ೧೯೫೫ರ ಮಾರ್ಚ್ ತರುಣದಲ್ಲಿ ಐನ್‌ಸ್ಟೈನರ ಅಸ್ತಿತ್ವದ ಬಗ್ಗೆ ಅರಿವು ಮೂಡಿತು ಮಾತ್ರವಲ್ಲ, ಅವರ ಎಪ್ಪತ್ತಾರನೆಯ ಜನ್ಮದಿನ ಮುಂದಿನ ಕೆಲವೇ ದಿವಸಗಳಲ್ಲಿ ಬರಲಿದೆ ಎಂಬ ಸಂಗತಿಯೂ ತಿಳಿದುಬಂತು. ತಮ್ಮ ಅಧ್ಯಾಪಿಕೆಯ ನೆರವಿನಿಂದ ಆ ಮಕ್ಕಳು ಐನ್‌ಸ್ಟೈನರಿಗೆ ಅನಂತ ಶುಭಾಶಯಗಳನ್ನು ಸಲ್ಲಿಸುವ ಒಂದು ಪತ್ರವನ್ನು ಮಾರ್ಚ್ ೧೦ರಂದು ಕಳಿಸಿದರು. ಅದರ ಜೊತೆಯಲ್ಲಿ ಉಡುಗೊರೆಯಾಗಿ ಕೊರಳಕಟ್ಟಿನ ಚಿಲಕವನ್ನೂ* ಕುಪ್ಪಸದ ಮಣಿಕಟ್ಟಿನ ಬಂಧಕಗಳನ್ನೂ† ಇರಿಸಿದ್ದರು. ಅದು ಐನ್‌ಸ್ಟೈನರ ಅಂತಿಮ ಜನ್ಮದಿನವಾಗಲಿತ್ತು.

೧೯೫೫ ಮಾರ್ಚ್ ೨೬ರಂದು ಐನ್‌ಸ್ಟೈನ್ ಇಂಗ್ಲಿಷಿನಲ್ಲಿ ಮಾರೋಲೆ ಬರೆದರು :

● ಪ್ರಿಯ ಮಕ್ಕಳೇ

ಹುಟ್ಟುಹಬ್ಬದ ಉಡುಗೊರೆ ಮತ್ತು ಅಭಿನಂದನ ಪತ್ರ ಇವನ್ನು ಒಲುಮೆಯಿಂದ ಕಳಿಸಿರುವುದಕ್ಕಾಗಿ ನಿಮಗೆಲ್ಲರಿಗೂ ನನ್ನ ಅಭಿವಂದನೆಗಳು. ಇನ್ನು

* tieclasp † cufflinks—ಕನ್ನಡಾನುವಾದಕ

ಮುಂದೆ ನಾನು ಈತನಕದಂತಲ್ಲದೆ ಕೊಂಚ ಜಾಸ್ತಿ ಔರಣವಾಗಿರಬೇಕೆಂಬುದನ್ನು ಈ ಉಡುಗೊರೆ ತುಂಬ ಔಚಿತ್ಯಪೂರ್ಣವಾಗಿ ಸೂಚಿಸಿದೆ. ಏಕೆಂದರೆ ಕೊರಳುಕಟ್ಟುಗಳೂ ಮಣಿಕಟ್ಟುಗಳೂ ಬಲು ಹಿಂದಿನ ನೆನಹುಗಳಾಗಿ ಮಾತ್ರ ನನ್ನಲ್ಲಿ ಉಳಿದಿವೆ. ●

ದಕ್ಷಿಣ ಆಫ್ರಿಕದ ಒಂದು ವಸತಿಶಾಲೆಯಲ್ಲಿದ್ದ ಬ್ರಿಟಿಷ್ ಶಿಕ್ಷಣಾರ್ಥಿಯಿಂದ ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ ಸುದೀರ್ಘವೂ ಮುಗ್ಧಾಕರ್ಷಕವೂ ಆದ ಒಂದು ಪತ್ರ ಬಂತು. ಇವರ ದಸ್ಕತ್ತು ಬೇಕೆಂಬ ಬೇಡಿಕೆ ಅದರಲ್ಲಿತ್ತು. ಅದರ ಉದ್ಧೃತಾಂಶವಿದು: "ಪ್ರಾಯಶಃ ಹಲವು ಯುಗಗಳಷ್ಟು ಹಿಂದೆಯೆ ನಾನು ನಿಮಗೆ ಕಾಗದ ಬರೆದಿರುತ್ತಿದ್ದೆ. ನೀವಿನ್ನೂ ಜೀವಂತವಾಗಿರುವಿರೆಂಬ ಸಂಗತಿ ನನಗೆ ಗೊತ್ತಿರಲಿಲ್ಲ, ಅಷ್ಟೆ. ನನಗೆ ಇತಿಹಾಸದಲ್ಲಿ ಆಸಕ್ತಿ ಇಲ್ಲ. ಹೀಗಾಗಿ ನೀವು ಹದಿನೆಂಟನೆಯ ಶತಮಾನದಲ್ಲಿ ಅಥವಾ ಆ ಸುಮಾರಿಗೆ ಜೀವಿಸಿದ್ದಿರೆಂದು ಭಾವಿಸಿದ್ದೆ. ಸರ್ ಐಸಾಕ್ ನ್ಯೂಟನ್ನರ ಅಥವಾ ಇನ್ನಾರ ಹೆಸರಿನ ಜೊತೆಗೊ ನಿಮ್ಮ ಹೆಸರನ್ನು ನಂಟುಹಾಕಿ ನಾನು ಈ ಗೊಂದಲಕ್ಕೆ ಸಿಕ್ಕಿಹಾಕಿಕೊಂಡುದಾಗಿರಬೇಕು." ಇದೇ ಕಾಗದದಲ್ಲಿ ಬರೆದಿದ್ದ ಇನ್ನೊಂದು ವಿಷಯ ಸ್ವಾರಸ್ಯಕರವಾಗಿತ್ತು. ಆ ಶಿಕ್ಷಣಾರ್ಥಿ ಮತ್ತು ಶಿಕ್ಷಣಾರ್ಥಿಯ ಮಿತ್ರ ಇಬ್ಬರಿಗೂ ಖಗೋಳವಿಜ್ಞಾನದಲ್ಲಿ ಅಪಾರ ಆಸಕ್ತಿ; ರಾತ್ರಿವೇಳೆ ಗ್ರಹನಕ್ಷತ್ರಗಳನ್ನು ವೀಕ್ಷಿಸಲೆಂದು ಅವರು, ಹಿರೇಮಣಿಯ ಕಾವಲು ಕೊಠಡಿಯ ಎದುರೇ, ತಾವು ಸಿಕ್ಕಿಹಾಕಿಕೊಂಡು ಅನುಭವಿಸಬೇಕಾಗಬಹುದಾದ ಅಪಾಯವನ್ನೂ ಲೆಕ್ಕಿಸದೆ, ತೆವಳಿ ಸಾಗುತ್ತಿದ್ದರು. ವಕ್ರಾಕಾಶವನ್ನು ಅರ್ಥವಿಸುವುದು ತನಗಿನ್ನೂ ಸಾಧ್ಯವಾಗಿಲ್ಲವೆಂದು ಆ ಶಿಕ್ಷಣಾರ್ಥಿಗೆ ಚಿಂತೆ. ಉಗ್ರ ದೇಶಭಕ್ತಿಯನ್ನು ಪ್ರದರ್ಶಿಸುವ "ನೀವು ಅಮೆರಿಕದ ಪೌರರಾಗಿರುವಿರೆಂದು ತಿಳಿದು ಖೇದವಾಯಿತು. ಇಂಗ್ಲೆಂಡಿನಲ್ಲಿ ನೀವಿದ್ದಿದ್ದರೆ ನನಗೆ ಹೆಚ್ಚು ಇಷ್ಟವಾಗಿರುತ್ತಿತ್ತು" ಎಂಬ ಮಾತುಗಳಿಂದ ಆ ಕಾಗದ ಮುಕ್ತಾಯವಾಗಿತ್ತು.

೧೯೪೬ರ ಆಗಸ್ಟ್ ೨೫ರಂದು ಐನ್‌ಸ್ಟೈನ್ ಇಂಗ್ಲಿಷಿನಲ್ಲಿ ಈ ರೀತಿ ಉತ್ತರ ಬರೆದರು:

● ಪ್ರಿಯ ಕುಮಾರ....

ಜುಲೈ ೧೦ರ ನಿನ್ನ ಕಾಗದಕ್ಕಾಗಿ ಅಭಿವಂದನೆಗಳು. ನಾನಿನ್ನೂ ಜೀವಂತರ

ಸಾಲಿನಲ್ಲಿರುವುದಕ್ಕೆ ನಿನ್ನ ಕ್ಷಮೆಯಾಚಿಸಬೇಕಾಗಿದೆ. ಹೇಗೂ ಇದಕ್ಕೊಂದು ಮದ್ದುಂಟು.

ವಕ್ರಾಕಾಶದ ಬಗ್ಗೆ ಚಿಂತಿಸಬೇಡ. ಅದಕ್ಕೆ ದೊರೆಯಬಹುದಾದ ಅಂತಸ್ತುಗಳ ಪೈಕಿ ಈ ಅಂತಸ್ತೇ ಅತ್ಯಂತ ಸುಲಭವಾದದ್ದೆಂದು ಮುಂದೊಂದು ದಿನ ನೀನು ತಿಳಿಯಲಿರುವೆ. ಸರಿಯಾದ ಛಾಯೆಯಲ್ಲಿ ಬಳಸಿದ್ದಾದರೆ 'ವಕ್ರ' ಪದಕ್ಕೆ ದೈನಂದಿನ ಭಾಷೆಯ ಅದೇ ಅರ್ಥವಿಲ್ಲ.

ನಿನ್ನ ಮತ್ತು ನಿನ್ನ ಸ್ನೇಹಿತನ ಖಗೋಳವೈಜ್ಞಾನಿಕಾನ್ವೇಷಣೆಗಳು ಭವಿಷ್ಯದಲ್ಲಿ ಎಂದೂ ನಿನ್ನ ಶಾಲಾಸರ್ಕಾರದ ಕಣ್ಣುಗಳಿಗೆ ಮತ್ತು ಕಿವಿಗಳಿಗೆ ಪತ್ತೆ ಆಗಲಾರವೆಂಬುದಾಗಿ ಆಶಿಸುತ್ತೇನೆ. ಒಳ್ಳೆಯ ಪೌರರ ಪೈಕಿ ಹೆಚ್ಚಿನವರು ತಮ್ಮ ಸರ್ಕಾರದ ಬಗೆಗೆ ತಳೆಯುವ ನಿಲವು ಇದೇ—ನನ್ನ ಅಭಿಪ್ರಾಯದಲ್ಲಿ ಇದು ಸರಿಯಾದದ್ದೇ.

ನಿನ್ನ ವಿಶ್ವಾಸಿ ●

ಐನ್‌ಸ್ಟೈನರ ದಸ್ಕತ್ತನ್ನು ಒಳಗೊಂಡಿದ್ದ ಈ ಕಾಗದ ಬಂದಾಗ ಆ ಶಿಕ್ಷಣಾರ್ಥಿಗೆ ರೋಮಾಂಚವಾಯಿತು. ಆದರೆ ಆ ಶಿಕ್ಷಣಾರ್ಥಿಯ ಹೆಸರಿನ ಮೊದಲ ಭಾಗ ತುಸು ವಿಚಿತ್ರವಾಗಿದ್ದುದರಿಂದ ಐನ್‌ಸ್ಟೈನ್ ಆಕೆಯನ್ನು ಹುಡುಗನೆಂದು ತಪ್ಪಾಗಿ ಭಾವಿಸಿದ್ದರು! ೧೯೪೬ ಸೆಪ್ಟೆಂಬರ್ ೧೯ರಂದು ಆಕೆ ಮಾರೋಲೆ ಬರೆದಳು: "ನಿಮಗೆ ಹೇಳಲು ಮರೆತಿದ್ದೆ.... ನಾನು ಹುಡುಗಿ ಆಗಿದ್ದೆನೆಂದು. ಅಂದರೆ ನಾನು ಹುಡುಗಿ. ಇದಕ್ಕಾಗಿ ನಾನು ಯಾವಾಗಲೂ ಅತಿಯಾಗಿ ಪರಿತಪಿಸುತ್ತೇನೆ. ಆದರೆ ಈಚೆಗೆ ನಾನು ಈ ವಸ್ತುಸ್ಥಿತಿಗೆ ಹೆಚ್ಚು ಕಡಿಮೆ ಒಗ್ಗಿಕೊಂಡಿದ್ದೇನೆ." ಮುಂದುವರಿಯುತ್ತ ಇದೇ ಕಾಗದದಲ್ಲಿ ಅವಳು "ನೀವಿನ್ನೂ ಜೀವಂತರಾಗಿದ್ದೀರೆಂಬ ಸಂಗತಿ ನನ್ನ ಅರಿವಿಗೆ ಬಂದುದು ನನ್ನನ್ನು ಹತಾಶೆಗೊಳಿಸಿತೆಂಬ ಧ್ವನಿ ನನ್ನ ಕಾಗದದಲ್ಲಿ ಸ್ಫುರಿಸಬೇಕೆಂಬುದು ಖಂಡಿತ ನನ್ನ ಉದ್ದೇಶವಾಗಿರಲಿಲ್ಲ" ಎಂದಳು.

ಐನ್‌ಸ್ಟೈನರ ಮಾರೋಲೆ:

● ನೀನು ಹುಡುಗಿ ಆಗಿರುವುದಕ್ಕೆ ನನಗೇನೂ ಚಿಂತೆ ಇಲ್ಲ; ಆದರೆ ಮುಖ್ಯ ಸಂಗತಿ ಎಂದರೆ ಖುದ್ದು ನೀನೇ ಇದರ ಬಗ್ಗೆ ಚಿಂತಿಸದಿರುವುದು. ಇದಕ್ಕೇನೂ ಕಾರಣವಿಲ್ಲ. ●

ಪ್ರಿನ್‌ಸ್ಟನ್ನಿನಲ್ಲಿದ್ದ ಐನ್‌ಸ್ಟೈನ್, ೧೯೩೩ರಲ್ಲಿ, ಈ ಮುಂದಿನ ಭಾಗವನ್ನು ಬರೆದರು. ಹಸ್ತಪ್ರತಿಯ ಮೇಲೆ 'ಪ್ರಕಟಿಸಲಿಲ್ಲ' ಎಂಬ ಷರಾ ಇದೆ. ಐನ್‌ಸ್ಟೈನರ ಮರಣಾನಂತರ ಇದನ್ನು ಆಟೊ ನಾಥನ್[82] ಮತ್ತು ಹೈನ್ಝ್ ನಾರ್ಡನ್ *Einstein on Peace* ಎಂಬ ತಮ್ಮ ಪುಸ್ತಕದಲ್ಲಿ ಪ್ರಕಟಿಸಿದರು. ಈ ಬರೆಹ ಅಸಾಧಾರಣವಾಗಿ ಅತಿ ಕಟುವಾಗಿರುವುದರಿಂದ, ಪ್ರಾಯಶಃ ಐನ್‌ಸ್ಟೈನ್ ಇದನ್ನು ಪ್ರಕಟಿಸದಿದ್ದುದಾಗಿರಬಹುದು. ಇದನ್ನು ಬರೆದುದರಿಂದ ಅವರಿಗೆ ಮಾನಸಿಕ ಸ್ವಾಸ್ಥ್ಯ ಒದಗಿರಬೇಕು :

● ಯೂರೋಪಿನ ಹೃದಯ ಭಾಗದಲ್ಲಿ ಅನಾವರಣಗೊಳ್ಳುತ್ತಿರುವ ರುದ್ರದೃಶ್ಯ ಜರ್ಮನಿಗೆ ಶಾಶ್ವತ ಕಳಂಕ ಬಡಿಯುವಂತೆ ಅತಿ ಭೀಕರವಾಗಿದೆ ಮತ್ತು ಅಮಾನುಷವಾಗಿದೆ. ತನ್ನನ್ನು ನಾಗರಿಕವೆಂದು ಕರೆದುಕೊಳ್ಳುತ್ತಿರುವ ಜನಾಂಗಗಳ ಸಮುದಾಯಕ್ಕೆ ಇದು ಖಂಡಿತವಾಗಿಯೂ ಭೂಷಣಪ್ರಾಯವಾದುದಲ್ಲ !

ಶಾಲಾಧ್ಯಾಪಕರ ಹಾಗೂ ಕವಾಯತಿ ಸಾರ್ಜೆಂಟುಗಳ ಅನುಸ್ಯೂತ ಪೀಳಿಗೆ ಜರ್ಮನ್ ಮಂದಿಗೆ ಶತಮಾನಗಳಿಂದಲೂ ಮತಿಭ್ರಾಂತಿಯನ್ನು ಊಡುತ್ತ ಬಂದಿದೆ. ಕಠಿಣ ಪರಿಶ್ರಮದ ಶಿಕ್ಷಣ ಇವರಿಗೆ ದೊರೆತಿದೆ. ಅನೇಕ ವಿಷಯಗಳಲ್ಲಿ ಇವರು ಪರಿಣಿತರೂ ಆಗಿದ್ದಾರೆ. ಆದರೆ ಇವುಗಳ ಜೊತೆಯಲ್ಲೇ ಇವರನ್ನು ಗುಲಾಮಗಿರಿಯ ಕುರ್ನಿಸಾತು ಮನೋಭಾವಕ್ಕೂ ದಂಡಿನ ಮಾಮೂಲೀ ಚರ್ವಿತಚರ್ವಣ ಮತ್ತು ಪಾಶವೀಯತೆಗಳಿಗೂ ಪಳಗಿಸಿ ಹೊಂದಿಸಲಾಗಿದೆ. ವೈಮರ್ ಗಣರಾಜ್ಯದ[83] ಯುದ್ಧೋತ್ತರ ಪ್ರಜಾಪ್ರಭುತ್ವಾತ್ಮಕ ಸಂವಿಧಾನ ಜರ್ಮನರಿಗೆ ದೈತ್ಯನ ಉಡುಗೆಗಳು ಉಂಗುಷ್ಠ ಮಹಾರಾಜನಿಗೆ ಪೊದರ್ುವಷ್ಟು ಅಡಕವಾಗಿ ಹೊಂದಿಕೊಂಡಿತು ! ಆಗ ಹಣದುಬ್ಬರ ಮತ್ತು ಮುಗ್ಗಟ್ಟು ಕವಿದು ಪ್ರತಿಯೊಬ್ಬನೂ ಭೀತ ಮತ್ತು ಉದ್ರಿಕ್ತ ವಾತಾವರಣದಲ್ಲಿ ನವೆಯುವಂತೆ ಮಾಡಿದುವು.

ಹಿಟ್ಲರ್[84] ರಂಗಪ್ರವೇಶಮಾಡಿದ. ಸನ್ನಿವೇಶ ಹಾಗೂ ನಿಸರ್ಗ ಇವುಗಳ ಕೂಡಿಕೆಯ ಪರಿಣಾಮವಾಗಿ ತನಗಿಂತ ಮೇಲು ಮಜಲಿನಲ್ಲಿದ್ದ ಎಲ್ಲವರ ಎದುರೂ ಇವನು ಅಸೂಯೆ ಮತ್ತು ಹಾಲಾಹಲ ಕಾರುತ್ತಿದ್ದ. ಬೌದ್ಧಿಕ

ವಾಗಿ ಇವನದು ಮಿತ ಸಾಮರ್ಥ್ಯ. ಯಾವುದೇ ಕೆಲಸಕ್ಕೂ ನಾಲಾಯಕ್. ನಿಮ್ನಮಧ್ಯಮವರ್ಗದಿಂದ ಮೇಲಕ್ಕೆ ಜಿಗಿದ ಹಿಟ್ಲರ್, ಜೀವನಮಟ್ಟಗಳಲ್ಲಿ ಅಧಿಕಸಮತೆ ಗಳಿಸಲು ಹೋರಾಡುತ್ತಿದ್ದ ಕಾರ್ಮಿಕ ವರ್ಗವನ್ನು ಕೂಡ ದ್ವೇಷಿಸುವಷ್ಟು ವರ್ಗಪ್ರತಿಷ್ಠೆಯನ್ನು ತನ್ನಲ್ಲಿ ತುಂಬಿಕೊಂಡಿದ್ದ. ಅಧಿಕಾರ ಕಬಳಿಸಬೇಕೆಂಬ ತನ್ನ ಉಗ್ರಹಂಬಲವನ್ನು ಈಡೇರಿಸಿಕೊಳ್ಳುವ ಹಾದಿ ಯಲ್ಲಿ ಇವನು ಗುಡುಗುತ್ತಿದ್ದ ಭಾಷಣಗಳು—ಇವು ಹಗೆತನದ ಕಟ್ಟೆಬಿರಿವ ಕಾವಿನಿಂದ ಅರ್ಥರಹಿತವಾಗಿದ್ದುವಾದರೂ—ಇವನ ಜೀವನ ಮತ್ತು ದೃಷ್ಟಿ ಗಳೊಡನೆ ಸಹಮತರಾಗಿದ್ದವರಿಗೆ ಆಪ್ಯಾಯಮಾನವಾಗಿದ್ದುವೆಂದು ಇವನಿಗೆ ತಿಳಿಯಿತು. ಓಣಿ ಮತ್ತು ಗಡಂಗುಗಳಿಂದ ಈ ತಿರುಕುಳಿ ಮಂದೆಯನ್ನು ಹೆಕ್ಕಿ ತನ್ನ ಸುತ್ತ ವ್ಯವಸ್ಥಿತವಾಗಿ ಹೆಣೆದುಕೊಂಡ. ಹಿಟ್ಲರ್ ತನ್ನ ರಾಜಕೀಯ ಜೀವನ ಆರಂಭಿಸಿದ್ದು ಹೀಗೆ.

ಆದರೆ ವಾಸ್ತವವಾಗಿ ಹಿಟ್ಲರನಿಗೆ ಧುರೀಣತ್ವದ ಅರ್ಹತೆ ಗಳಿಸಿಕೊಟ್ಟ ದ್ದೆಂದರೆ ವಿದೇಶೀಯವಾದ ಪ್ರತಿಯೊಂದರ ಎದುರೂ ಅವನಲ್ಲಿ ತಹತಹಿಸು ತ್ತಿದ್ದ ಕಟುದ್ವೇಷ—ಅದರಲ್ಲೂ, ರಕ್ಷಣರಹಿತ ಅಲ್ಪಸಂಖ್ಯಾತ ಯೆಹೂದ್ಯರ ಬಗೆಗಿನ ತಿರಸ್ಕಾರ. ಇವರ ಬೌದ್ಧಿಕ ಸಂವೇದನಶೀಲತೆ ಅವನಲ್ಲಿ ಒಂದು ವಿಧದ ಅಸಹನೆಯನ್ನು ಪ್ರೇರಿಸಿತ್ತು. ಈ ಸಂವೇದನಶೀಲತೆಯನ್ನು ಅವನು —ಸ್ವಲ್ಪಮಟ್ಟಿಗೆ ಸಕಾರಣೀಯವಾಗಿಯೇ—ಅಜರ್ಮನ್ ಎಂಬುದಾಗಿ ಪರಿಗಣಿಸಿದ್ದ.

ಈ ಎರಡು 'ಶತ್ರುಗಳ' ಎದುರು ಹಿಟ್ಲರ್ ಹೂಡಿದ ಉದ್ರೇಕಕಾರಿ ವಾಗ್ಸಮರಗಳು ಅವನಿಗೆ ಜನಜಂಗುಳಿಯ ಬೆಂಬಲ ಒದಗಿಸಿಕೊಟ್ಟವು. ಆ ಮಂದಿಗೆ ಆತ ಅದ್ಭುತ ವೈಭವಗಳನ್ನೂ ಸುವರ್ಣ ಯುಗವನ್ನೂ ಆಶ್ವಾಸಿ ಸಿದ. ಕವಾಯತಿ, ಆಜ್ಞೆ, ಅಂಧವಿನೀತತೆ ಮತ್ತು ಕ್ರೌರ್ಯ ಇವುಗಳ ಬಗೆಗೆ ಜರ್ಮನಿಯಲ್ಲಿ ಶತಮಾನಗಳ ಕಾಲದಿಂದ ಬೆಳೆದುಬಂದಿದ್ದ ಆಸಕ್ತಿ ಅಭಿರುಚಿ ಗಳನ್ನು ಆತ ಸ್ವಂತೋದ್ದೇಶಗಳ ಈಡೇರಿಕೆಗೆ ತುಂಬ ಮುತ್ಸದ್ದಿತನದಿಂದ ಬಳಸಿಕೊಂಡ. ಹೀಗೆ ಹಿಟ್ಲರ್ ಫ್ಯೂಹ್ರೆರ್ ಆದ.

ಅವನ ಬೊಕ್ಕಸಗಳಿಗೆ ಹಣದ ಹೊಳೆಯೇ ಹರಿದು ಬಂದಿತು. ಆಸ್ತಿವಂತ ವರ್ಗಗಳು ಇದಕ್ಕೆ ಸಲ್ಲಿಸಿದ ದೇಣಿಗೆ ಕಡಿಮೆ ಏನೂ ಆಗಿರಲಿಲ್ಲ. ಜನರ ಸಾಮಾಜಿಕ ಹಾಗೂ ಆರ್ಥಿಕ ವಿಮೋಚನೆಗಾಗಿ ವೈಮರ್ ಗಣರಾಜ್ಯ ಪ್ರವರ್ತಿಸಿದ್ದ ಕ್ರಮಗಳನ್ನು ರದ್ದುಗೊಳಿಸಲು ಉಪಯುಕ್ತವಾಗಬಲ್ಲ ಒಂದು ಹತ್ಯಾರನ್ನು ಈ ವರ್ಗಗಳು ಅವನಲ್ಲಿ ಕಂಡವು. ಪ್ರಪಂಚಯುದ್ಧಕ್ಕೆ

ಮೊದಲು ಜನರಿಗೆ ಅಭ್ಯಾಸವಾಗಿಹೋಗಿದ್ದ ಒಂದು ಬಗೆಯ ರಮ್ಯ ಮತ್ತು ಕಪಟ ಸ್ವದೇಶಾಭಿಮಾನಪೂರ್ವಕ ಶಬ್ದಜಾಲ ಮತ್ತು ಯೆಹೂದ್ಯ ವೈರಿಗಳು ತಮ್ಮ ಕುಟಿಲೋದ್ದೇಶಗಳ ಈಡೇರಿಕೆಗೆಂದೇ ಉಪಜ್ಞಿಸಿದ 'ಆರ್ಯ' ಅಥವಾ 'ನಾರ್ಡಿಕ್' ಜನಾಂಗದ ಆರೋಪಿತ ಶ್ರೇಷ್ಠತ್ವದ ಬಗೆಗಿನ ಕಟ್ಟುಕತೆ—ಇವನ್ನು ಹಿಟ್ಲರ್ ಜನರ ಮುಂದೆ ಯಶಸ್ವಿಯಾಗಿ ಬಿತ್ತರಿಸಿದ. ಅವನು ಎಡಬಿಡದೆ ಗಳಹುತ್ತಿದ್ದ ಈ ಬೊಂತೆಯನ್ನು ಖುದ್ದು ಅವನೇ ಎಷ್ಟರಮಟ್ಟಿಗೆ ನಂಬಿರಬಹುದೆಂಬುದನ್ನು ಅರಿಯುವುದು ಅವನ ಎಡ್ಡತಿಡ್ಡ ವ್ಯಕ್ತಿತ್ವದ ಕಾರಣವಾಗಿ ಅಸಾಧ್ಯವೇ ಸೈ. ಆದರೆ ಒಂದಂತೂ ಖರೆ. ಅವನ ಸುತ್ತಮುತ್ತ ಜಮಾಯಿಸಿಕೊಂಡಿದ್ದವರ ಪೈಕಿ, ಹೆಚ್ಚಿನವರು ತಮ್ಮ ಆನೈತಿಕ ವಿಧಾನಗಳ ಅಸತ್ಯವನ್ನು ಪೂರ್ಣವಾಗಿ ಅರಿತಿದ್ದ ಕಠಿಣ ಮನಸ್ಕ ಶೂನ್ಯವಾದಿಗಳಾಗಿದ್ದರು. ●

ಲಿಯೊ ಬೈಕ್ ಎಂಬುವರು ಬರ್ಲಿನ್ನಿನಲ್ಲಿದ್ದ ಯೆಹೂದ್ಯ ಸಮುದಾಯದ ಪ್ರಮುಖ ರಬ್ಬಿ. ಇವರು ಪ್ರಪಂಚವಿಖ್ಯಾತ ಪಂಡಿತರೂ ಹೌದು. ನಾಟ್ಸಿಗಳು ಅಧಿಕಾರಾರೂಢರಾದಾಗ ಇವರಿಗೆ ಜರ್ಮನಿಯ ಹೊರಗಿನಿಂದ ಉನ್ನತ ಸ್ಥಾನಗಳಿಗಾಗಿ ಬಂದ ಅನೇಕ ಆಕರ್ಷಕ ಆಮಂತ್ರಣಗಳು ಇವರನ್ನು ನಾಟ್ಸೀ ದುರಾತ್ಮರ ಯೆಹೂದ್ಯದ್ವೇಷದ ಮಾರಣಹೋಮದಿಂದ ದೈಹಿಕವಾಗಿ ಪಾರುಮಾಡಬಲ್ಲವಾಗಿದ್ದುವು. ಆದರೆ ಇವರು ಅವೆಲ್ಲವನ್ನೂ ನಿರಾಕರಿಸಿ ಜರ್ಮನಿಯಲ್ಲಿದ್ದ ಯೆಹೂದ್ಯ ಭ್ರಾತೃಗಳ ಜೊತೆಗೆ ಅಪಾಯಗಳನ್ನು ಸಹ-ಭೋಗಿಸಲು ನಿರ್ಧರಿಸಿದರು. ಅನೇಕಬಾರಿ ಕೈದುಮಾಡಿದ ಬಳಿಕ ಇವರನ್ನು ಟಿರೆಸಿನ್ನಿನಲ್ಲಿದ್ದ ನರಕಯಾತನಾಶಿಬಿರಕ್ಕೆ ರವಾನಿಸಲಾಯಿತು. ಮುಂದೆ ಜರ್ಮನ್ ಸೈನ್ಯಗಳು ಕುಸಿದು ಕುಕ್ಕರಿಸಿ ರಶ್ಯನ್ ಪದಾತಿಗಳು ಇವರನ್ನು ವಿಮೋಚನೆಗೊಳಿಸುವ ತನಕವೂ ಇವರು ಅಲ್ಲಿಯೇ ಇದ್ದರು.

೧೯೫೩ ಮೇಯಲ್ಲಿ ಲಿಯೊ ಬೈಕ್ ಅವರ ಎಂಬತ್ತನೆಯ ಹುಟ್ಟುಹಬ್ಬದ ವೇಳೆ ಐನ್‌ಸ್ಟೈನ್ ಪ್ರಿನ್‌ಸ್ಟನ್ನಿನಿಂದ ಈ ಮುಂದಿನ ಮನಂಬುಗುವ ನಲ್ನುಡಿ ಬರೆದರು :

● ಜರ್ಮನಿಯಲ್ಲಿ ಸೆರೆಸಿಕ್ಕಿಹಾಕಿಕೊಂಡು ಖಾತ್ರಿ ಸರ್ವನಾಶವನ್ನೇ ಎದುರು ನೋಡುತ್ತಿದ್ದ ತಮ್ಮ ಹತಭಾಗ್ಯ ಸೋದರರಿಗೆ ಈ ವ್ಯಕ್ತಿ ಏನಾಗಿದ್ದರು ಎಂಬುದನ್ನು ಬಾಹ್ಯ ಸನ್ನಿವೇಶಗಳ ಕಾರಣವಾಗಿ ತೋರ್ಕೆ

ಸುರಕ್ಷಣೆ ಹೊಂದಿರುವವರು ಪೂರ್ತಿ ಗ್ರಹಿಸಲಾರರು. ಮರುಕಹೀನ ವಿನಾಶಕರ ಪೀಡನೆಯು ನಾಡಿನಲ್ಲಿ ಎಲ್ಲ ಉಪಟಳ ಕೋಟಲೆಗಳನ್ನು ತಾಳಿಕೊಂಡು ಉಳಿದಿದ್ದು ತಮ್ಮ ಕೊನೆ ಉಸಿರಿನ ತನಕವೂ ಸೋದರರಿಗೆ ಆಧ್ಯಾತ್ಮಿಕ ಪೋಷಣೆ ಒದಗಿಸುವುದು ತಮ್ಮ ಖಚಿತ ಕರ್ತವ್ಯವೆಂದು ಇವರು ನಂಬಿದ್ದರು. ಗರಳ ಕಾರುವ ಕೊಲೆಪಾತಕರಿಂದ ರಚಿತವಾಗಿದ್ದ ಸರ್ಕಾರದ ಪ್ರತಿನಿಧಿಗಳ ಜೊತೆ ಇವರು ಯಾವುದೇ ಅಪಾಯ ಲೆಕ್ಕಿಸದೆ ಸಂಧಾನ ಪ್ರಯತ್ನ ಮಾಡಿದರು ಮತ್ತು ಪ್ರತಿಯೊಂದು ಸನ್ನಿವೇಶವಲ್ಲಿಯೂ ತಮ್ಮ ಹಾಗೂ ತಮ್ಮ ಜನರ ಗಾಂಭೀರ್ಯವನ್ನು ಕಾಪಾಡಿಕೊಂಡುಬಂದರು. ●

ರಬ್ಬಿ ಬ್ಯೇಕ್ ಅವರ ಗೌರವಾರ್ಥ ಏರ್ಪಡಿಸಲಾಗಿದ್ದ ಒಂದು ಸಂಭಾವನ ಗ್ರಂಥಕ್ಕೆ ತಮ್ಮ ನುಡಿಕಾಣ್ಕೆ ಸಲ್ಲಿಸಬೇಕೆಂದು ಐನ್‌ಸ್ಟೈನರನ್ನು ಪ್ರಾರ್ಥಿಸಿದಾಗ ಇವರು ೧೯೫೩ ಫೆಬ್ರುವರಿ ೨೫ರಂದು ಹೀಗೆ ಬರೆದರು :

● ನಿಮ್ಮ ಉತ್ಕೃಷ್ಟ ಯೋಜನೆಗೆ ನೆರವು ನೀಡುವುದು ನನ್ನ ಅಪೇಕ್ಷೆಯಾದರೂ ನಮ್ಮ ಪೂಜ್ಯ ಹಾಗೂ ಆತ್ಮೀಯ ಸ್ನೇಹಿತರ ಕಾರ್ಯಕ್ಷೇತ್ರ ಕುರಿತಂತೆ ನಾನು ಯಾವುದೇ ಕೊಡುಗೆ ನೀಡಲು ಅಸಮರ್ಥನಾದ್ದರಿಂದ ಈ ಮುಂದಿನ ವಿಲಕ್ಷಣ ಭಾವನೆಗೆ ಶರಣುಹೋಗಿದ್ದೇನೆ: ನನ್ನ ಅನುಭವದಿಂದ ಆಯ್ದ ಕೆಲವು ಸಂಗತಿಗಳನ್ನು, ನಮ್ಮ ಸ್ನೇಹಿತರಿಗೆ ಕೊಂಚ ಸುಖ ನೀಡಬಲ್ಲ ಮಾತ್ರೆಗಳ ರೂಪದಲ್ಲಿ ಅಳವಡಿಸುವುದು—ಆದರೆ ಇವುಗಳ ಪೈಕಿ ಪ್ರಾಯಶಃ ಮೊದಲನೆಯ ಮಾತ್ರೆಗೆ ಮಾತ್ರ ಅವರೊಡನೆ ಸಂಬಂಧ ಕಲ್ಪಿಸಬಹುದು ಅಷ್ಟೆ. ●

ಹೆಚ್ಚಿನ ಭಾಗದಲ್ಲಿ ಈ 'ಮಾತ್ರೆಗಳು' ತೀವ್ರ ಛೇದಕ ಸೂಕ್ತಿಗಳಾಗಿದ್ದುವು. ಒಂದು ಉದಾಹರಣೆ :

● ಕುರಿಮಂದೆಯೊಂದರ ನಿಷ್ಕಳಂಕ ಸದಸ್ಯನಾಗಲು ಒಬ್ಬ, ಎಲ್ಲದಕ್ಕಿಂತಲೂ ಮೊದಲಿಗೆ, ಸ್ವತಃ ಕುರಿಯೇ ಆಗಿರತಕ್ಕದ್ದು. ●

'ಮಾತ್ರೆಗಳ' ಪೈಕಿ ಮೊದಲಿನದು ಸ್ವತಃ ಬ್ಯೇಕ್ ಅವರನ್ನೇ ಕುರಿತುದಾಗಿತ್ತು. ಅದು ಸೂಕ್ತಿ ಅಲ್ಲ, ಬದಲು ಸತ್ಯವಚನ :

● ಬಾಳಿನ ಉದ್ದಕ್ಕೂ ನೆರವನ್ನೇ ನೀಡುತ್ತ ಸಾಗಿದ, ಭಯವನ್ನು

ಅರಿಯದ ಮತ್ತು ಎಲ್ಲ ಬಗೆಯ ಉಗ್ರತೆ ಹಾಗೂ ರೋಷ ಪರಕೀಯ ವಾಗಿದ್ದ ಈ ಮಹಾಪುರುಷನಿಗೆ ನಮೋ ಎನ್ನುತ್ತೇನೆ. ಇಂಥ ಚೌಬೀನೆಯಿಂದ ಕಂಡರಿಸಿದ ಮಾದರಿಗಳನ್ನು ಆಧರಿಸಿ ನಾವು ನಮ್ಮನ್ನು ರೂಪಿಸಿಕೊಳ್ಳುತ್ತೇವೆ; ಮತ್ತು ಮನುಕುಲ ತಾನೇ ಸೃಷ್ಟಿಸಿಕೊಂಡ ನರಳಾಟದ ನಡುವೆಯೂ ಇಂಥವರಿಂದ ಸಾಂತ್ವನ ಪಡೆಯುತ್ತದೆ. ●

ಐನ್‌ಸ್ಟೈನರ ಎಪ್ಪತ್ತೈದನೆಯ ಹುಟ್ಟುಹಬ್ಬದ ನೆನಪಿಗಾಗಿ ರಬ್ಬಿ ಬ್ಲೇಕ್ ಅವರು ೧೯೫೪ರ ಮಾರ್ಚ್ ೧೭ರಂದು ಈ ಮುಂದಿನ ಪತ್ರವನ್ನು ಐನ್‌ಸ್ಟೈನರಿಗೆ ಕಳಿಸಿದರು :

"ನೈತಿಕತೆಯ ಅಸ್ತಿತ್ವವೆಂಬ ಪ್ರಶ್ನೆ, 'ಇಲ್ಲ'ವೆನ್ನುವ ಒಂದೇ ಒಂದು ಉತ್ತರ ಪಡೆಯುತ್ತಿದೆಯೆಂದು ಭಾಸವಾಗುತ್ತಿದ್ದ ದಿನಗಳಂದು ಅಥವಾ ಮಾನವತ್ವವೆಂಬ ಪರಿಕಲ್ಪನೆಯೇ ಸಂದೇಹಾಸ್ಪದವಾಗಿದ್ದಂದು, ನಿಮ್ಮ ಬಗ್ಗೆ ಯೋಚಿಸಲು ಸಾಧ್ಯವಾಗುತ್ತಿದ್ದುದು ನನ್ನ ಭಾಗ್ಯ ; ಮತ್ತು ಆಗ ನನ್ನಲ್ಲಿ ಶಾಂತಿಯ ಹಾಗೂ ದಾರ್ಢ್ಯದ ಭಾವಗಳು ಮೂಡುತ್ತಿದ್ದುವು. ಅದೆಷ್ಟು ದಿನ ನೀವು ನನ್ನ ಮನಃಪಟಲದ ಮೇಲೆ ಸುಳಿದಿಲ್ಲ ಮತ್ತು ನನ್ನೊಡನೆ ಮಾತಾಡಿಲ್ಲ !"

೧೯೫೫ ಏಪ್ರಿಲ್ ೧೮ರಂದು ಐನ್‌ಸ್ಟೈನ್ ಪ್ರಿನ್‌ಸ್ಟನ್ನಿನಲ್ಲಿ ಮಡಿದರು. ಕಾರ್ನೀಲಿಯಸ್ ಲ್ಯಾಂಕ್ಜೋಸ್[೫೬] ೧೯೫೫ ೨೭ರಂದು ಈ ಮುಂದಿನ ಸಾಲುಗಳನ್ನು ಐನ್‌ಸ್ಟೈನರ ಮಗಳು ಮಾರ್ಗಟ್ ಅವರಿಗೆ ಕಳಿಸಿದರು :

"....ಇಂಥ ಒಬ್ಬ ವ್ಯಕ್ತಿ ಚಿರಂಜೀವಿ ಎಂದೆನಿಸುತ್ತದೆ—ಬೇಟೋವನ್ನಂಥ[೫೮] ಒಬ್ಬ ವ್ಯಕ್ತಿ ಹೇಗೆ ಎಂದೂ ಮೃತನಾಗನೊ ಹಾಗೆ. ಆದರೆ ಶಾಶ್ವತವಾಗಿ ನಷ್ಟವಾಗಿಹೋದ ಬೇರೇನೋ ಒಂದಿದೆ : ಬಾಳುವುದರ ಬಗೆಗೆ ಅವರಿಗಿದ್ದ ಪರಿಪೂರ್ಣಾನಂದ—ಇದು ಅವರ ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿತ್ತು. ಊಹೆಗೂ ನಿಲುಕದಷ್ಟು ವಿನಯವಂತರೂ ನಿರಾಡಂಬರ ಸ್ವಭಾವದವರೂ ಆಗಿದ್ದ ಈ ಮಹಾಪುರುಷ ನಮ್ಮೊಡನೆ ಉಳಿದಿಲ್ಲವೆಂಬುದನ್ನು ಒಪ್ಪುವುದು ಅತಿ ಕಷ್ಟ. ವಿಧಿ ಅವರಿಗೆ ಅನುಗ್ರಹಿಸಿದ್ದ ಅವರ ಏಕಮೇವಾದ್ವಿತೀಯ ಪಾತ್ರದ ಪೂರ್ಣ ಅರಿವಿನ ಜೊತೆಗೆ ಸ್ವಂತ ಹಿರಿಮೆಯ ಅರಿವು ಕೂಡ ಅವರಿಗಿತ್ತು. ಆದರೆ ಆ ಹಿರಿಮೆ ಹಿಮಾಲಯಭವ್ಯವಾಗಿದ್ದುದೆ

ರಿಂದಲೇ—ಬಾಹ್ಯವರ್ತನೆಯಾಗಿ ಅಲ್ಲ, ಬದಲು ಆಂತರಿಕಾವಶ್ಯಕತೆಯಾಗಿ —ಅವರು ನಮ್ರರೂ ವಿನೀತರೂ ಆಗಿದ್ದರು....”

ಪ್ರಾಯಶಃ ಮ್ಯೂನಿಕ್ಕಿನಲ್ಲಿ ವಾಸಿಸುತ್ತಿದ್ದ ಒಬ್ಬ ವೃತ್ತಿ ಸಂಗೀತಗಾರನಿಂದ ೧೯೩೩ರ ತರುಣದಲ್ಲಿ, ಐನ್‌ಸ್ಟೈನರಿಗೊಂದು ಕಾಗದ ಬಂದಿತು. ಕೆಲಸ ಕಳೆದುಕೊಂಡಿದ್ದ ಅವನು ನಿಜಕ್ಕೂ ಕ್ಷುಬ್ಧಮನಸ್ಕನಾಗಿದ್ದ, ನಿರುತ್ಸಾಹಿಯಾಗಿದ್ದ. ಹೀಗಿದ್ದಾಗ್ಯೂ ಅವನು ಐನ್‌ಸ್ಟೈನರೊಂದಿಗೆ ಭಾವಸಾಮ್ಯ ಹೊಂದಿದವನಾಗಿದ್ದಿರಬೇಕು. ಅವನ ಕಾಗದ ಕಾಣೆ ಆಗಿದೆ. ಉಳಿದಿರುವುದೇನಿದ್ದರೂ ಐನ್‌ಸ್ಟೈನರ ಮಾರೋಲೆ ಮಾತ್ರ. ಇದರ ತಾರೀಕು ೫ ಏಪ್ರಿಲ್ ೧೯೩೩ ಆಗಿರುವುದರಿಂದ ಐನ್‌ಸ್ಟೈನ್ ಇದನ್ನು ಪ್ರಾಯಶಃ ಲೇಕಾಕ್‌ನಿಂದ ರವಾನಿಸಿದುದಾಗಿರಬಹುದು. ಇಲ್ಲಿ ಈ ಕಾಗದದಿಂದ ಭಾಗಶಃ ಉದ್ಧರಿಸಿದೆ. ಇದರಲ್ಲಿ ಮರುಕೊಳಿಸುತ್ತಿರುವ ನಿರಾಶೆ ಕಾಲರಹಿತವಾದದ್ದು. ಸ್ವತಃ ಐನ್‌ಸ್ಟೈನರೇ ತಮುಸ್ಸಿನ ವಿರುದ್ಧ ತಮ್ಮ ಕದನವನ್ನು ಎಂದೂ ನಿಲ್ಲಿಸಲಿಲ್ಲವೆಂಬುದೊಂದೇ ಇವರಲ್ಲಿ ಮಿನುಗುತ್ತಿರುವ ಆಶಾಜ್ಯೋತಿ. ಮೊದಲವಾಕ್ಯದಲ್ಲಿ ಕಂಡುಬರುವ ಜಾಗರೂಕ ಅನಾಮಿಕತ್ವವನ್ನು ಗಮನಿಸಿ—ಹೀಗಾಗಿ ಕಾಗದ ಪಡೆದಾತ ಸುರಕ್ಷಿತನಾಗಿರುತ್ತಾನೆ :

● ಬೆಲ್ಜಿಯನ್ ಅಕ್ಯಾಡೆಮಿಯ ದ್ವಾರಾ ನೀವು ಬರೆದ ಕಾಗದದ ವಿಳಾಸದಾರ ನಾನೇ....ವೃತ್ತಪತ್ರಿಕೆಗಳನ್ನು ಓದಬೇಡಿ. ನಿಮ್ಮಂತೆಯೇ ಯೋಚಿಸಬಲ್ಲ ಕೆಲವು ಸ್ನೇಹಿತರನ್ನು ಪತ್ತೆಹಚ್ಚಲು ಪ್ರಯತ್ನಿಸಿ. ಗತಯುಗಗಳ ಅದ್ಭುತ ಲೇಖಕರಾದ ಕಾಂಟ್, ಗ್ಯೊಥೇ, ಲೆಸಿಂಗ್ ಮೊದಲಾದವರ ಕೃತಿಗಳನ್ನೂ ಇತರ ದೇಶಗಳ ಅಭಿಜಾತ ವಾಙ್ಮಯಗಳನ್ನೂ ಓದಿ. ಮ್ಯೂನಿಕ್ಕಿನ ಸುತ್ತಮುತ್ತಲಿನ ನೈಸರ್ಗಿಕ ಸೌಂದರ್ಯವನ್ನು ಆಸ್ವಾದಿಸಿ. ಒಂದು ಅರ್ಥದಲ್ಲಿ, ಸದಾಕಾಲ ಅಂಗಾರಕದಲ್ಲಿ ಪರಕೀಯ ಜೀವಿಗಳ ಜೊತೆ ವಾಸಿಸುತ್ತಿರುವುದಾಗಿ ನಿಮ್ಮನ್ನು ನೀವೇ ನಂಬಿಸಿಕೊಳ್ಳಿ. ಆದರೆ ಆ ಜೀವಿಗಳ ಚಟುವಟಿಕೆಗಳಲ್ಲಿ ಯಾವುದೇ ಆಳವಾದ ಆಸಕ್ತಿ ತಳೆಯುವುದನ್ನು ಪೂರ್ತಿ ಅಳಿಸಿಹಾಕಿ. ಕೆಲವೇ ಪ್ರಾಣಿಗಳ ಸ್ನೇಹ ಬೆಳೆಸಿ. ಆಗ ನೀವು ಪುನಃ ಉತ್ಸಾಹಭರಿತರಾಗುವಿರಿ ಮತ್ತು ಯಾವುದೂ ನಿಮ್ಮನ್ನು ಬಾಧಿಸಲು ಶಕ್ಯವಾಗಲಾರದು.

ಕೋಮಲಹೃದಯಿಗಳೂ ಉದಾತ್ತ ಗುಣವಂತರೂ ಆದವರು ಸದಾ ಏಕಾಕಿಗಳು—ಇದು ಅವಶ್ಯವಾಗಿ ಹೀಗೆಯೇ—ಎಂಬುದನ್ನು ನೆನಪಿನಲ್ಲಿಡಿ;

ಮತ್ತು ಈ ಕಾರಣದಿಂದಲೇ ಅವರು ಸ್ವಂತ ವಾತಾವರಣದ ಪರಿಶುದ್ಧತೆಯಲ್ಲಿ ವಿಹರಿಸಬಲ್ಲವರಾಗಿದ್ದಾರೆ.

ಹಾರ್ದಿಕ ಬಂಧುತ್ವದ ಭಾವನೆಯಿಂದ ನಾನು ನಿಮಗೆ ಹಸ್ತಾಲಿಂಗನ ಮೀಯುತ್ತೇನೆ.

E.

ಐನ್‌ಸ್ಟೈನ್ ಈ ಪ್ರಪಂಚದಲ್ಲಿದ್ದ ಸರ್ವಶ್ರೇಷ್ಠ ವಿಜ್ಞಾನಿ ಆಗಿದ್ದರು. ಆದರೆ ಪ್ರಪಂಚ ಹೇಗಿತ್ತೆಂದರೆ ಅವರು ಈ ಕಾಗದಕ್ಕೆ ಒಂಟಿ ಅಕ್ಷರದ E ಯಿಂದ ರುಜುವಿಕ್ಕಿದರೇ ವಿನಾ ಈ ಮುಂದಿನಂತಲ್ಲ:

Albert Einstein

# ಐನ್‌ಸ್ಟೈನ್ : ಸಂಕ್ಷೇಪ ಕಾಲಸೂಚಿ

ಆಲ್ಬರ್ಟ್ ಐನ್‌ಸ್ಟೈನ್ ಜರ್ಮನಿಯ ಉಲ್ಮ್ ಪಟ್ಟಣದಲ್ಲಿ ೧೮೭೯ ಮಾರ್ಚ್ ೧೪ರಂದು ಜನಿಸಿದರು. ಇವರ ತಂಗಿ ಮಾಜಾ ಎರಡೂವರೆ ವರ್ಷಗಳ ತರುವಾಯ ಮ್ಯೂನಿಕ್ಕಿನಲ್ಲಿ ಹುಟ್ಟಿದರು. ವಯಸ್ಸು ಐದಾಗಿದ್ದಾಗ ಐನ್‌ಸ್ಟೈನರಿಗೊಂದು ಕಾಂತೀಯ ದಿಕ್ಸೂಚಿ ದೊರೆಯಿತು. ಆಗ ಇವರಲ್ಲಿ ಸ್ಫುರಿಸಿದ ನಿಗೂಢ ವಿಸ್ಮಯ ಮತ್ತು ವಿಚಿತ್ರ ಆಶ್ಚರ್ಯ ಬಾಳಿನುದ್ದಕ್ಕೂ ಇವರ ಸಂಗಾತಿಗಳಾಗಿದ್ದುವು. ಇವರ ಪರಮೋತ್ಕೃಷ್ಟ ವೈಜ್ಞಾನಿಕ ಸಾಧನೆಗಳ ಪ್ರಧಾನ ಸ್ಫೂರ್ತಿಯೇ ಇವು. ಪ್ರಾಯ ಹನ್ನೆರಡರಲ್ಲಿ, ಮೊದಲ ಬಾರಿಗೆ, ಜ್ಯಾಮಿತಿ ಪುಸ್ತಕವೊಂದನ್ನು ಪರಾಂಬರಿಸಿದಾಗಲೂ ಇವರು ಅದೇ ವಿಸ್ಮಯ ಭಾವದಿಂದ ಉದ್ದೀಪಿತರಾಗಿದ್ದರು.

ಜರ್ಮನಿಯ ಶಾಲೆಗಳಲ್ಲಿ ಪ್ರಚಲಿತವಾಗಿದ್ದ ಉಕ್ಕಿನ ಶಿಸ್ತು ಮತ್ತು ಉರುಹೊಡೆವ ಕಲಿಕೆಗಳನ್ನು ಸುತರಾಂ ಒಲ್ಲದ ಇವರು ಹದಿನೈದನೆಯ ವಯಸ್ಸಿನಲ್ಲಿ ಶಾಲೆಯಿಂದ ಹೊರಗುದುರಿದರು. ೧೮೯೬ರಲ್ಲಿ ಝೂರಿಕ್ಕಿನ (ಸ್ವಿಟ್ಸರ್ಲೆಂಡ್) ಪಾಲಿಟೆಕ್ನಿಕ್ ಇನ್‌ಸ್ಟಿಟ್ಯೂಟಿಗೆ ದಾಖಲಾದರು. ೧೯೦೦ರಲ್ಲಿ ಸ್ನಾತಕ ಪದವಿ ಗಳಿಸಿದರಾದರೂ ಪ್ರಾಧ್ಯಾಪಕರ ತೀವ್ರ ಅಸಮಾಧಾನಕ್ಕೆ ಗುರಿಯಾಗಿದ್ದುದರಿಂದ ಇವರಿಗೆ ಯಾವುದೇ ಶೈಕ್ಷಣಿಕ ಸ್ಥಾನ ಲಭಿಸಲಿಲ್ಲ.

೧೯೦೧ರಲ್ಲಿ ಐನ್‌ಸ್ಟೈನ್ ಸ್ವಿಸ್ ಪ್ರಜೆ ಆದರು. ಬದುಕಿನಲ್ಲಿ ಹಲವು ಹತಾಶೆಗಳನ್ನು ಎದುರಿಸಿದ ಬಳಿಕ, ೧೯೦೨ರಲ್ಲಿ, ಇವರಿಗೆ ಬರ್ನ್ ನಗರದಲ್ಲಿದ್ದ ಸ್ವಿಸ್ ಏಕಸ್ವಕಛೇರಿಯಲ್ಲಿ ಹುದ್ದೆ ದೊರೆಯಿತು. ಒಡನೆ ಇವರು ತತ್ಪೂರ್ವ ಇವರ ಸಹಪಾಠಿ ಆಗಿದ್ದ ಮಿಲೇವಾ ಮ್ಯಾರಿಕ್ ಎಂಬಾಕೆಯನ್ನು ಮದುವೆ ಆದರು. ಈ ದಾಂಪತ್ಯದಿಂದ ಇಬ್ಬರು ಗಂಡುಮಕ್ಕಳು ಜನಿಸಿದರಾದರೂ ವಿವಾಹ ಮಾತ್ರ ಯಶಸ್ವಿ ಆಗಲಿಲ್ಲ. ಪರಸ್ಪರ ಸಮ್ಮತಿಯಿಂದ ಇದು ವಿಚ್ಛೇದನೆಯಲ್ಲಿ ಪರ್ಯವಸಾನಗೊಂಡಿತು (೧೯೧೯).

ಏತನ್ಮಧ್ಯೆ, ೧೯೦೫ರ ಚರಿತ್ರಾರ್ಹ ಇಸವಿಯಲ್ಲಿ, ಇವರ ಪ್ರತಿಭೆ ಏಕಸ್ವ ಕಛೇರಿಯಲ್ಲಿ ಪರಮೋಜ್ಜ್ವಲ ಪುಷ್ಪವಾಗಿ ವಿಕಸಿಸಿತು. ಆ ವರ್ಷ ಇವರು

ಸಲ್ಲಿಸಿದ ಹಲವಾರು ಮುಖ್ಯ ದೇಣಿಗೆಗಳ ಪೈಕಿ ಸಾಪೇಕ್ಷತಾ ಸಿದ್ಧಾಂತ ಒಂದು ಮಾತ್ರ.

೧೯೦೯ರ ತನಕವೂ ಇವರು ಏಕಸ್ವ ಕಛೇರಿಯಿಂದ ನಿಷ್ಕ್ರಮಿಸಲಿಲ್ಲ. ೧೯೦೯ರಿಂದ ಮುಂದಿನ ಪ್ರಗತಿ ಅತಿ ಕ್ಷಿಪ್ರ: ೧೯೧೪ರ ವೇಳೆಗೆ ಬರ್ಲಿನ್ನಿನ ರಾಯಲ್ ಪ್ರಶ್ಯನ್ ಅಕಾಡೆಮಿ ಆಫ್ ಸೈನ್ಸಸ್ಸಿನಲ್ಲಿ ವೇತನ ಪಡೆವ ಒಬ್ಬ ಸದಸ್ಯರಾಗಿ ಅಧಿಕಾರದ ಪರಮೋನ್ನತ ಸ್ಥಾನವನ್ನೈದಿದ್ದರು.

ಸ್ವಿಸ್ ಪ್ರಜೆಯಾಗಿದ್ದ ಇವರು ಆಗಸ್ಟ್ ೧೯೧೪ರಲ್ಲಿ ಸ್ಫೋಟಗೊಂಡ ಒಂದನೆಯ ಮಹಾಯುದ್ಧದಲ್ಲಿ ಯಾವುದೇ ಪಾತ್ರ ವಹಿಸಲಿಲ್ಲ. ೧೯೧೬ರಲ್ಲಿ ತಮ್ಮ ಆಚಾರ್ಯ ಕೃತಿ ಸಾರ್ವತ್ರಿಕ ಸಾಪೇಕ್ಷತಾಸಿದ್ಧಾಂತವನ್ನು ಪ್ರಕಟಿಸಿದರು. ವಿಧವೆಯಾಗಿದ್ದ ಸೋದರಿಕೆ ಸಂಬಂಧಿ ಎಲ್ಸಾರೊಡನೆ ಇವರ ವಿವಾಹ ೧೯೧೯ರಲ್ಲಿ ಜರಗಿತು. ಈಕೆಗೆ ಮೊದಲ ಮದುವೆಯಿಂದ ಇಬ್ಬರು ಮಗಳಂದಿರಿದ್ದರು. ಐನ್‌ಸ್ಟೈನರ ಸಿದ್ಧಾಂತ ಕಣಿನುಡಿದಿದ್ದ ಒಂದು ಫಲಿತಾಂಶ ೧೯೧೯ರ ಉತ್ತರಾರ್ಧದಲ್ಲಿ ವೀಕ್ಷಣೆಯಿಂದ ಸ್ಥಿರಪಟ್ಟಾಗ ಇವರಿಗೆ ಬೈಗು ಬೆಳಗಾಗುವ ಮೊದಲೇ ಪ್ರಪಂಚಖ್ಯಾತಿ ಪ್ರಾಪ್ತವಾಯಿತು. ಭೌತವಿಜ್ಞಾನ ವಿಭಾಗದ ೧೯೨೧ರ ಸಾಲಿನ ನೊಬೆಲ್ ಪಾರಿತೋಷಿಕವನ್ನು ಇವರಿಗೆ ಪ್ರದಾನಿಸಲಾಯಿತು.

ಉಳಿದ ಅಂಶದ ಬಗ್ಗೆ ಇಲ್ಲಿ ಹೆಚ್ಚಿನ ವಿವರವೇನೂ ಬರೆಯಬೇಕಾಗಿಲ್ಲ. ಏಕೆಂದರೆ ಅದು ನಿರ್ಣಾಯಕ ವರ್ಷವಾದ ೧೯೩೩ರ ಸುತ್ತ ಹೆಣೆದುಕೊಂಡಿದೆ. ಐನ್‌ಸ್ಟೈನರ ಖ್ಯಾತಿ ಹಾಗೂ ದಿಟ್ಟ ಬಿಚ್ಚುನುಡಿಗಳು ಜರ್ಮನಿಯಲ್ಲಿ ಇವರ ಹಾಗೂ ಇವರ ಸಿದ್ಧಾಂತಗಳ ಎದುರಾಗಿ ಯೆಹೂದ್ಯವಿರೋಧಿ ದಾಳಿಗಳಿಗೆ ಕಾರಣವಾದುವು. ೧೯೩೩ರ ತರುಣದಲ್ಲಿ ನಾಟ್ಸಿಗಳು ಅಧಿಕಾರ ಕಬಳಿಸಿದಾಗ ಐನ್‌ಸ್ಟೈನ್ ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿದ್ದರು. ಮುಂದೆಂದೂ ಇವರು ಜರ್ಮನಿಗೆ ಮರಳಲಿಲ್ಲ. ಬದಲಾಗಿ ಬೆಲ್ಜಿಯಮ್ಮಿನ ಲೇಕಾಕ್‌ನಲ್ಲಿ ಕೆಲವು ತಿಂಗಳುಗಳ ಕಾಲ ತಂಗಿದ್ದು, ಮುಂದೆ ಇಂಗ್ಲೆಂಡಿನಲ್ಲಿ ಅಲ್ಪಕಾಲ ಕಳೆದು, ಅಕ್ಟೋಬರ್ ೧೯೩೩ರಲ್ಲಿ ಆದಾಗ ತಾನೇ ನ್ಯೂಜೆರ್ಸಿಯ ಪ್ರಿನ್ಸ್‌ಟನ್ನಿನಲ್ಲಿ ಸ್ಥಾಪಿಸಲಾಗಿದ್ದ ಇನ್‌ಸ್ಟಿಟ್ಯೂಟ್ ಫಾರ್ ಅಡ್ವಾನ್ಸ್‌ಡ್ ಸ್ಟಡಿಯ ಶಿಕ್ಷಣವಿಭಾಗ ಸೇರಲು ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ ವಲಸೆ ಹೋದರು. ಶೇಷಾಯುಷ್ಯವನ್ನು ಅಲ್ಲೇ ಕಳೆದು ೧೯೫೫ ಏಪ್ರಿಲ್ ೧೮ರಂದು ಮಡಿದರು.

# ಆಭಾರ ಮನ್ನಣೆ

ಈ ಪುಸ್ತಕವನ್ನು ಹೊರತರಬೇಕೆಂದು ಹಮ್ಮಿಕೊಂಡ ಕ್ಷಣದಿಂದಲೂ ಇದರ ಬಗ್ಗೆ ವೈಯಕ್ತಿಕ ಆಸಕ್ತಿಯನ್ನು ವ್ಯಕ್ತಪಡಿಸಿರುವ ಪ್ರಿನ್‌ಸ್ಟನ್ ಯೂನಿವರ್ಸಿಟಿ ಪ್ರೆಸ್ಸಿನ ಡೈರೆಕ್ಟರ್ (ಕಿರಿಯ) ಹರ್ಬರ್ಟ್ ಎಸ್. ಬೈಲೀ ಇವರಿಗೆ ಕೃತಜ್ಞರಾಗಿದ್ದೇವೆ. ಇವರ ಉತ್ಸಾಹ, ಪ್ರೋತ್ಸಾಹ ಮತ್ತು ಸಲಹೆ ಪುಸ್ತಕ ಪ್ರಕಟಣೆಯ ಕಾರ್ಯವನ್ನು ಬಲು ಹಗುರಾಗಿಸಿವೆ.

ಅನುವಾದಿತ ಬಾಬುಗಳನ್ನು[86] ಸೋಂಜಾ ಬರ್ಗ್‌ಮಾನ್ ತೀಕ್ಷ್ಣ ತಪಾಸಣೆಗೆ ಒಳಪಡಿಸಿ ದೋಷಗಳನ್ನು ತಿದ್ದಿದುದೊಂದೇ ಅಲ್ಲ, ಖುದ್ದು ಪದಪ್ರಯೋಗದಲ್ಲಿ ಪ್ರಮುಖ ಸುಧಾರಣೆಗಳನ್ನು ಕೂಡ ತಂದಿದ್ದಾರೆ. ಇವರಿಗೆ ನಮ್ಮ ನೆನಕೆಗಳು. ಧ್ವನಿಪೂರ್ಣ ಸೂಚನೆಗಳನ್ನು ನೀಡಿ ಸಂಪಾದಕೀಯ ಚಾಣಾಕ್ಷತೆಯನ್ನು ಪ್ರದರ್ಶಿಸಿರುವ ಗೇಲ್ ಫಿಲಿಯನ್ ಅವರಿಗೆ ಆಭಾರಿಗಳಾಗಿದ್ದೇವೆ.

ಈ ಮುಂದಿನವರಿಗೆ ನಮ್ಮ ಧನ್ಯವಾದಗಳು : ಮಿಸೆಸ್ ಮಾರಿಯೇಸ್ ಡ್ರೈಫಸ್—ಇವರ ಅಜ್ಜ ಲಿಯೊ ಬ್ಲೈಕ್ ಬರೆದ ಒಂದು ಕಾಗದದಿಂದ ಉದ್ಧರಿಸಲು ಅನುಮತಿ ನೀಡಿದುದಕ್ಕೆ ; ಎಲ್ಮಾರ್ ಲ್ಯಾಂಕ್ಝೋಸ್— ಕಾರ್ನೀಲಿಯಸ್ ಲ್ಯಾಂಕ್ಝೋಸ್ ಬರೆದ ಒಂದು ಕಾಗದದಿಂದ ಉದ್ಧರಿಸಲು ಅನುಮತಿ ನೀಡಿದುದಕ್ಕೆ ; ಎಲ್. ಎಫ್. ಹೇಬರ್—ಫ್ರಿಟ್ಝ್ ಹೇಬರ್ ಬರೆದ ಒಂದು ಕಾಗದದಿಂದ ಉದ್ಧರಿಸಲು ಅನುಮತಿ ನೀಡಿದುದಕ್ಕೆ ; ತಿಯೋಡೋರ್ ಫಾನ್ ಲವೇ—ಮ್ಯಾಕ್ಸ್ ಫಾನ್ ಲವೇ ಬರೆದ ಒಂದು ಕಾಗದದಿಂದ ಉದ್ಧರಿಸಲು ಅನುಮತಿ ನೀಡಿದುದಕ್ಕೆ ; ಜೆ. ಪೀಮಾನ್ಸ್, ಚೆಫ್–ಅಡ್ಜ್ಯಾಂಟ್ ಡ್ಯೂ ಕ್ಯಾಬಿನೆಟ್ ಡ್ಯೂ ರಾಯ್—ಬೆಲ್ಜಿಯಮ್ಮಿನ ದಿವಂಗತ ರಾಣಿ ಎಲಿಝಬೆತ್ ಬರೆದ ಒಂದು ಪದ್ಯವನ್ನು ಉದ್ಧರಿಸಲು ಅನುಮತಿ ನೀಡಿದುದಕ್ಕೆ ; ಮತ್ತು ಖಂಡಿತವಾಗಿಯೂ, ಆಟೊ ನಾಥನ್—ಐನ್‌ಸ್ಟೈನರ ಬರಹಗಳಿಂದ ಸಮೃದ್ಧವಾಗಿ ಉದ್ಧರಿಸಲು ಅನುಮತಿ ನೀಡಿದುದಕ್ಕೆ ಮತ್ತು ನಮ್ಮ ಈ ಪುಸ್ತಕದ ಬಗ್ಗೆ ಜೀವಂತ ಆಸಕ್ತಿ ತಳೆದುದಕ್ಕೆ.

ಮತ್ತು ಈ ತಂಡ ಹಾಡಲು/ನುಡಿಸಲು ರಚಿಸಿದ ಸಂಗೀತ ಕೃತಿ)

೩೬ ಕಾರಣತಾ ಹಾಗೂ ಸಂಭಾವ್ಯಸಿದ್ಧಾಂತಗಳು = Causal and probabilistic theories. ಕಾರಣತೆ ಎಂದರೆ ಕಾರಣ-ಪರಿಣಾಮ ಸಂಬಂಧ ; ಸಂಭಾವ್ಯತೆ—ನೋಡಿ ೨೩

೩೭ ಮೊಜ಼ಾರ್ಟ್, ವೂಲ್ಫ್‌ಗ್ಯಾಂಗ್ ಅಮೇಡ್ಯೂಸ್ ಕ್ರೈಸೊಸ್ಟಮ್, ೧೭೫೬–೯೧, ಆಸ್ಟ್ರಿಯಾದ ಸಂಗೀತರಚನಕಾರ

೩೮ ಲಾ ರಾಶ್‌ಫ್ಯೂಕೊ, ಫ್ರಾಂಕೋಯಿಸ್, ೧೬೧೩–೮೦, ಫ್ರಾನ್ಸಿನ ಲೇಖಕ

೩೯ ಹಿರಿನೀರು : ಅಟ್ಲಾಂಟಿಕ್ ಸಾಗರ

೪೦ ಡ ಸಿಟರ್, ವಿಲ್ಲೆಮ್, ೧೮೭೨–೧೯೩೪, ಡಚ್ ಖಗೋಳವಿಜ್ಞಾನಿ

೪೧ ಸ್ಪಿನೋಜ಼ಾ, ಬೆನೆಡಿಕ್ಟ್ ಡ, ೧೬೩೨–೭೭, ಡಚ್ ಯೆಹೂದ್ಯ ತತ್ತ್ವಶಾಸ್ತ್ರಜ್ಞ ಮತ್ತು ಅನುಭಾವಿ

೪೨ ಜೆಂಟೈಲ್ : ಯೆಹೂದ್ಯೇತರ (ವಿಶೇಷವಾಗಿ ಕ್ರಿಶ್ಚಿಯನ್)

೪೩ ಜ಼ಯನಿಸಮ್ : ಪ್ಯಾಲೆಸ್ಟೈನನ್ನು ಯೆಹೂದ್ಯರ ತಾಯಿನಾಡಾಗಿ ಸ್ಥಾಪಿಸಲು ಪ್ರಪಂಚಾದ್ಯಂತ ಹೂಡಲಾದ ಚಳವಳಿ. ಆರಲ್ಲಿಯಂತೆ, ನೋಡಿ ಪುಟ ೧೩೩

೪೪ ಆರಲ್ಲಿಯಂತೆ, ನೋಡಿ ಪುಟ ೮೦

೪೫ ಚೈಮ್ ವೈಟ್ಸ್‌ಮನ್, ೧೮೭೪–೧೯೫೨, ಯೆಹೂದ್ಯರ ಧುರೀಣ, ಜ಼ಯನಿಸಮ್ಮಿನ ಪ್ರವರ್ತಕ. ಆರಲ್ಲಿಯಂತೆ, ನೋಡಿ ಪುಟ ೧೩೭

೪೬ ಹರ್ಜ಼್ಲ್, ತಿಯೊಡೋರ್, ೧೮೬೦–೧೯೦೪, ಜ಼ಯನಿಸ್ಟ್ ಮುಖಂಡ

೪೭ ಡ್ರೈಫಸ್ ವಿಚಾರಣೆ : ಆಲ್ಫ್ರೆಡ್ ಡ್ರೈಫಸ್, ೧೮೫೯–೧೯೩೫, ಫ್ರಾನ್ಸಿನ ಶ್ರೀಮಂತ ಯೆಹೂದ್ಯ ಕುಟುಂಬದಲ್ಲಿ ಹುಟ್ಟಿದ. ಫ್ರೆಂಚ್ ಸೇನೆಯಲ್ಲಿ ಅಧಿಕಾರಿಯಾಗಿದ್ದ. ರಾಷ್ಟ್ರೀಯ ರಕ್ಷಣೆಗೆ ಸಂಬಂಧಪಟ್ಟ ಗುಪ್ತಪತ್ರಗಳನ್ನು ಇವನು ವಿದೇಶೀ ಸರ್ಕಾರಕ್ಕೆ ಕದ್ದು ಸಾಗಿಸಿದನೆಂಬ, ೧೮೯೩–೯೪, ಮಿಥ್ಯಾರೋಪವನ್ನು ಇವನ ವಿರುದ್ಧ ಹೇರಿ ಮಿಲಿಟರಿ ವಿಚಾರಣೆ ನಡೆಸಲಾಯಿತು. 'ಆರೋಪ' ಸಾಬೀತಾಗಿ ಇವನಿಗೆ ಕಠಿಣ ಕಾರಾಗೃಹ ಶಿಕ್ಷೆಯನ್ನು ವಿಧಿಸಲಾಯಿತು. ಇವನ ಹೆಂಡತಿ ಮತ್ತು ಗೆಳೆಯರು ಈ ಅನ್ಯಾಯವನ್ನು ನೇರ್ಪುಗೊಳಿಸಲು ಮಾಡಿದ ಭಗೀರಥ ಪ್ರಯತ್ನ ಫ್ರಾನ್ಸಿನ ಆದ್ಯಂತ ಯೆಹೂದ್ಯವಿರೋಧೀ ಕಂಪನಗಳನ್ನೂ ರಾಜಕೀಯ ವಿಪ್ಲವನನ್ನೂ ಬಡಿದೆಬ್ಬಿಸಿತು. ಫ್ರಾನ್ಸಿನಲ್ಲಿ ಯೆಹೂದ್ಯದ್ವೇಷ ಮುಸಳುವ ತನಕವೂ, ೧೯೦೬, ಡ್ರೈಫಸನಿಗೆ ನ್ಯಾಯಪ್ರದಾನವಾಗಲಿಲ್ಲ. ಕೊನೆಗೂ ಇವನ ನಿರಪರಾಧಿತ್ವ ೧೯೦೬ರಲ್ಲಿ ಸಾಬೀತಾಗಿ ಇವನು ಅಪವಾದವಿಮುಕ್ತನಾದ. ಮುಂದೆ ಒಂದನೆಯ ಮಹಾಯುದ್ಧದಲ್ಲಿ, ೧೯೧೪–೧೮, ಇವನು ಫ್ರಾನ್ಸಿನ ಪರವಾಗಿ ಹೋರಾಡಿ ೧೯೧೯ರಲ್ಲಿ ಲೀಜಿಯನ್ ಆಫ್ ಆನರ್ ಎಂಬ ಗೌರವ ಪ್ರಶಸ್ತಿ ಪಡೆದ

೪೮ ಯಂತ್ರವಿದ್ಯಾತ್ಮಕ ಕಾರಣತೆ = mechanistic causality, ನೋಡಿ ೩೬

೪೯ ಲ್ಯಾಂಕ್ಜೋಸ್, ಕಾರ್ನೀಲಿಯಸ್, ೧೮೯೩–೧೯೭೪, ಹಂಗೆರಿಯ ಗಣಿತ-ಭೌ ವಿಜ್ಞಾನಿ, ಐನ್‌ಸ್ಟೈನರ ಸಹಯೋಗಿ, ೧೯೨೩, ಐನ್‌ಸ್ಟೈನರ ವೈಜ್ಞಾ ಜೀವನ ವೃತ್ತಾಂತದ ಲೇಖಕ

೫೦ ಮ್ಯಾಕ್ ಅರ್ನ್ಸ್ಟ್, ೧೮೩೮–೧೯೧೬, ಆಸ್ಟ್ರಿಯಾ ದೇಶದ ಭೌತವಿಜ್ಞಾನಿ

೫೧ ಸಂಶಯಾತ್ಮಕ ಮತ್ತು ಇಂದ್ರಿಯಾನುಭವಾತ್ಮಕವಾದ = skeptical empiricism

೫೨ ಬುದ್ಧ್ಯೈಕಪ್ರಾಮಾಣ್ಯವಾದಿ = believing rationalist

೫೩ ಸಂಖ್ಯಾಕಲನವಿಜ್ಞಾನ = statistics

೫೪ ಭಗವಂತನ ಇಸ್ಪೀಟೆಲೆಗಳು : ೪ರಲ್ಲಿಯಂತೆ, ನೋಡಿ ಪುಟ ೩೫೬–೩೫೭

೫೫ ನಿರ್ಧಾರಣೀಯತೆ = determinism. ಸಕಲ ವಾಸ್ತವಾಂಶಗಳೂ ಘಟನೆಗಳೂ ನೈಸರ್ಗಿಕ ನಿಯಮಗಳನ್ನು ಪ್ರತಿಪಾದಿಸುತ್ತವೆ. ಆದ್ದರಿಂದ ಮನುಷ್ಯರ ವರ್ತನೆ, ಆಯ್ಕೆ, ನಿರ್ಧಾರ ಮುಂತಾದವನ್ನೂ ಒಳಗೊಂಡಂತೆ ಸಮಸ್ತ ಘಟನೆಗಳಿಗೂ ಹಿನ್ನೆಲೆಯಲ್ಲಿ ಖಚಿತ ಕಾರಣಗಳಿವೆ ಎಂಬುದಾಗಿ ನಿರ್ಧಾರಣೀಯತಾ ತತ್ತ್ವ ವಾದಿಸುತ್ತದೆ

೫೬ ನಿಬಂಧಿತ = implication

೫೭ ಬಾಕ್, ಯೋಹನ್ ಸೆಬಾಸ್ಟಿಯನ್, ೧೬೮೫–೧೭೫೦, ಜರ್ಮನಿಯ ಸಂಗೀತ ರಚನಕಾರ

೫೮ ಬೀಟೋವನ್, ಲಡ್ವಿಗ್ ಫಾನ್, ೧೭೭೦–೧೮೨೭, ಜರ್ಮನಿಯ ಸಂಗೀತ ರಚನಕಾರ

೫೯ ಶೂಬರ್ಟ್, ಫ್ರಾನ್ಜ್ ಪೀಟರ್, ೧೭೯೭–೧೮೨೮, ಆಸ್ಟ್ರಿಯದ ಸಂಗೀತ ರಚನಕಾರ

೬೦ ಹ್ಯಾಂಡೆಲ್, ಜಾರ್ಜ್ ಫ್ರೆಡರಿಕ್, ೧೬೮೫–೧೭೫೯, ಜರ್ಮನ್–ಇಂಗ್ಲಿಷ್ ಸಂಗೀತ ರಚನಕಾರ

೬೧ ಶೂಮನ್, ರಾಬರ್ಟ್ ಆಲೆಕ್ಸಾಂಡರ್, ೧೮೧೦–೫೬, ಜರ್ಮನ್ ಸಂಗೀತ ರಚನಕಾರ

೬೨ ಮೆಂಡೆಲ್‌ಸ್ಸಾನ್ (–ಬಾರ್ತೋಲ್ಡಿ), ಫೆಲಿಕ್ಸ್, ೧೮೦೯–೧೮೪೭, ಜರ್ಮನ್ ಸಂಗೀತರಚನಕಾರ

೬೩ ಬ್ರಾಮ್ಸ್, ಯೋಹಾನೆಸ್, ೧೮೩೩–೯೭, ಜರ್ಮನ್ ಸಂಗೀತರಚನಕಾರ

೬೪ ವ್ಯಾಗ್ನರ್, ವಿಲ್‌ಹೆಲ್ಮ್ ರಿಚರ್ಡ್, ೧೮೧೩–೮೩, ಜರ್ಮನ್ ಸಂಗೀತ ರಚನಕಾರ

೬೫ ಡೆಬ್ಯೂಸಿ, ಕ್ಲಾಡ್ ಅಚಿಲ್, ೧೮೬೨–೧೯೧೮, ಫ್ರೆಂಚ್ ಸಂಗೀತರಚನಕಾರ

೬೬ ಬ್ಲಾಕ್, ಅರ್ನೆಸ್ಟ್, ೧೮೮೦–೧೯೫೯, ಸ್ವಿಸ್-ಅಮೆರಿಕನ್ ಸಂಗೀತ ರಚನಕಾರ

೬೭ ಶೋಪೆನ್‌ಹಾರ್, ೧೭೮೮–೧೮೬೦, ಜರ್ಮನಿಯ ನಿರಾಶಾವಾದಿ ತತ್ತ್ವಶಾಸ್ತ್ರಜ್ಞ

೬೮ ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾऽರಸಂ ನಿತ್ಯಮಗಂಧವಚ್ಚಯತ್
ಅನಾದ್ಯನಂತಂ ಮಹತಃಪರಂ ಧ್ರುವಂ ನಿಚಾಯ್ಯ ತನ್ಮೃತ್ಯು
ಮುಖಾತ್ಪ್ರಮುಚ್ಯತೇ (ಕಠೋಪನಿಷತ್ತು)

(ಅದು [ಆತ್ಮ] ಶಬ್ದರಹಿತ, ಸ್ಪರ್ಶರಹಿತ, ಅವ್ಯಯ, ರೂಪರಹಿತ. ಅದೇ ರೀತಿಯಲ್ಲಿ ಅದು ರಸರಹಿತ, ನಿತ್ಯ, ಗಂಧರಹಿತ, ಅನಾಧಿ, ಅನಂತ. ಮಹತ್ತ್ವದಾಚೆಗೆ ಅಂದರೆ ವಿರಾಟದಾಚೆಗೆ ಇರುವಂಥದು, ಸತ್ಯ. ಅದನ್ನರಿತವನು ಮೃತ್ಯು ಮುಖದಿಂದ ಪಾರಾಗುವವನು. ಅನು–ರಂ. ರಾ. ದಿವಾಕರ)

೬೯ ತಾರ್ಕಿಕ ಭೌತವಾದ = dialectical materialism, ಕಾರ್ಲ್‌ಮಾರ್ಕ್ಸ್ ೧೮೧೮–೮೩, ಪ್ರತಿಪಾದಿಸಿದ ಸಿದ್ಧಾಂತ

೭೦ ಆದರ್ಶವಾದ = idealism

೭೧ ವ್ಯಕ್ತಿನಿಷ್ಠತಾವಾದ = subjectivism

೭೨ ದ್ರವ್ಯಾತ್ಮಕ ನಿಸರ್ಗದ ವಸ್ತುನಿಷ್ಠತೆ = the objectivity of material universe

೭೩ ಸೂತ್ರವಿಧಿ = tenet

೭೪ ಎಡಿಸನ್, ತಾಮಸ್ ಆಲ್ವ, ೧೮೪೭–೧೯೩೧, ಅಮೆರಿಕದ ಉಪಜ್ಞೆಕಾರ. ಸೈದ್ಧಾಂತಿಕ ಭೌತವಿಜ್ಞಾನಕ್ಕೆ ಐನ್‌ಸ್ಟೈನ್ ಹೇಗೋ ಅನ್ವಿತ ಭೌತವಿಜ್ಞಾನಕ್ಕೆ ಎಡಿಸನ್ ಹಾಗೆ

೭೫ ಘೆಟ್ಟೊ : ಯೂರೊಪಿನ ನಗರಗಳಲ್ಲಿ ಯೆಹೂದ್ಯರಿಗೆಂದೇ ಮೀಸಲಾಗಿದ್ದ ತಾಂಡೆ ('ಶುದ್ಧ' ರಕ್ತದವರೊಂದಿಗೆ ಈ 'ಅಸ್ಪೃಶ್ಯ'ರು ಬೆರೆಯಬಾರದೆಂಬುದು ಇಲ್ಲಿಯ ಇಂಗಿತ)

೭೬ ಫ್ಯಾರಡೆ, ಮೈಕಲ್, ೧೭೯೧–೧೮೬೭, ಇಂಗ್ಲೆಂಡಿನ ಭೌತ ಮತ್ತು ರಸಾಯನ ವಿಜ್ಞಾನಿ

೭೭ ಐದನೆಯ ಚಾರ್ಲ್ಸ್, ೧೩೩೭–೮೦, ಫ್ರಾನ್ಸಿನ ದೊರೆ, wise (ಪ್ರಾಜ್ಞ) ಎಂಬ ಅನ್ವರ್ಥ ನಾಮಾಂಕಿತ

೭೮ ಊಹನಾತ್ಮಕ ತತ್ತ್ವಶಾಸ್ತ್ರ = speculative philosophy

೭೯ ಡಾನ್ ಕ್ವಿಕ್ಸೋಟ್ : ಸ್ಪೇನಿನ ಕಾದಂಬರಿಕಾರ ಸರ್ವಾಂಟಿಸ್, ೧೫೪೭–೧೬೧೬, ಬರೆದ ಕಾದಂಬರಿ, ಮತ್ತು ಅದರ ನಾಯಕ. ಅತಿಶಯ ವೀರಪುಂಗವತೆ, ರಮ್ಯತೆ, ಸ್ವಪ್ನಶೀಲತೆ, ಅಪ್ರಾಯೋಗಿಕ ಆದರ್ಶ, ಅಕಾರ್ಯಶೀಲತೆ ಮುಂತಾದ ಗುಣಗಳ ಸಂಮಿಲನದಿಂದ ಉದ್ಭವಿಸಿದ ಪಾತ್ರ

೮೦ ರೂಸ್ವೆಲ್ಟ್, ಎಲಿನಾರ್ ೧೮೮೪–೧೯೬೨, ಅಮೆರಿಕದ ಮೂವತ್ತೆರಡನೆಯ ಅಧ್ಯಕ್ಷ ಫ್ರಾಂಕ್ಲಿನ್ ಡಿಲಾನೊ ರೂಸ್ವೆಲ್ಟರ, ೧೮೮೨–೧೯೪೫, ಸಮರ್ಥ ಪತ್ನಿ, ಸಮಾಜ ಕಾರ್ಯಕರ್ತೆ

೮೧ ಶ್ವೈಟ್ಜರ್, ಆಲ್ಬರ್ಟ್, ೧೮೭೫–೧೯೬೫, ಅಮೆರಿಕದ ವೈದ್ಯನಿಯೋಗಿ, ಮತಧರ್ಮ ಶಾಸ್ತ್ರಜ್ಞ, ಸಂಗೀತಗಾರ ಹಾಗೂ ತತ್ತ್ವಶಾಸ್ತ್ರಜ್ಞ, ಬೌದ್ಧಿಕ ಸಾಧನೆ ಹಾಗೂ ಪ್ರಾಯೋಗಿಕ ನೈತಿಕತೆ ಕುರಿತಂತೆ ಇಪ್ಪತ್ತನೆಯ ಶತಮಾನದ ಪರಮೋತ್ತುಂಗಪುರುಷ. ಬೌದ್ಧಧರ್ಮದಲ್ಲಿಯ ಅಹಿಂಸಾತತ್ತ್ವದಲ್ಲಿ ವಿಶೇಷವಾಗಿ ಆಸಕ್ತ

೮೨ ನಾಥನ್ ಆಟೊ : ಐನ್‌ಸ್ಟೈನರ ಆಜೀವ ಸ್ನೇಹಿತ, ಎಸ್ಟೇಟ್ ಆಫ್ ಆಲ್ಬರ್ಟ್ ಐನ್‌ಸ್ಟೈನ್ ಇದರ ಟ್ರಸ್ಟೀ (ನ್ಯಾಸಧಾರಿ)

೮೩ ವೈಮರ್ ಗಣರಾಜ್ಯ : ಜರ್ಮನಿಯ ವೈಮರ್ ಎಂಬಲ್ಲಿ ಸ್ಥಾಪಿಸಲಾದ ಮತ್ತು ೧೯೧೯–೩೩ ಅವಧಿಯಲ್ಲಿ ಅಸ್ತಿತ್ವದಲ್ಲಿದ್ದ ಗಣರಾಜ್ಯ

೮೪ ಹಿಟ್ಲರ್, ಆಡಾಲ್ಫ್, ೧೮೮೯–೧೯೪೫, ಜರ್ಮನಿಯ ನಿರಂಕುಶ ಪ್ರಭು, ನಾಟ್ಸೀ ನಾಯಕ

೮೫ ಮಾರ್ಗಟ್ : ಎಲ್ಸಾ ಅವರ (ನೋಡಿ ೩೨) ಮಗಳು, ಐನ್‌ಸ್ಟೈನರ ದತ್ತುಪುತ್ರಿ

೮೬ ಮೂಲ ಜರ್ಮನಿಯಿಂದ ಇಂಗ್ಲಿಷಿಗೆ ಮಾಡಲಾದ ಅನುವಾದ

# ಐನ್‌ಸ್ಟೈನ್ ವಾಣಿ

## ಆತ್ಮಚರಿತ್ರೆಯಿಂದ

ಅಲ್ಲಿ [ಝೂರಿಕ್ಕಿನ ಪಾಲಿಟೆಕ್ನಿಕ್ಕಿನಲ್ಲಿ] ಬಲು ಸಮರ್ಥ ಗಣಿತ ಪ್ರಾಧ್ಯಾಪಕರಿದ್ದರು (ಉದಾಹರಣೆಗೆ : ಹರ್ವಿಟ್ಜ್, ಮಿಂಕೊವ್ಸ್ಕೀ ಮೊದಲಾದವರು). ಹೀಗಾಗಿ ನಿಜಕ್ಕೂ ನಾನು ಪರಿಪುಷ್ಟ ಗಣಿತಶಿಕ್ಷಣ ಪಡೆಯಬಹುದಾಗಿತ್ತು. ಆದರೂ ಹೆಚ್ಚಿನ ವೇಳೆಯನ್ನು ಭೌತವಿಜ್ಞಾನದ ಪ್ರಯೋಗಮಂದಿರದಲ್ಲಿ ಕೆಲಸಮಾಡುತ್ತ ವಿನಿಯೋಗಿಸುತ್ತಿದ್ದೆ. ಇಲ್ಲಿ ಅನುಭವದೊಡನೆ ಒದಗುತ್ತಿದ್ದ ನೇರ ಸಂಸ್ಪರ್ಶ ನನ್ನನ್ನು ಸಂಮೋಹಗೊಳಿಸಿತ್ತು. ಉಳಿದ ಕಾಲ ಹೆಚ್ಚಾಗಿ ಮನೆಯಲ್ಲಿ ಕಿರ್ಖಫ್, ಹೆಲ್ಮ್‌ಹೋಲ್ಜ್, ಹರ್ಟ್ಸ್ ಮೊದಲಾದವರ ಕೃತಿಗಳ ಅಧ್ಯಯನದಲ್ಲಿ ನಿರತನಾಗಿರುತ್ತಿದ್ದೆ. ಗಣಿತವನ್ನು ನಾನು ಸ್ವಲ್ಪ ಮಟ್ಟಿಗೆ ಕಡೆಗಣಿಸಿದ್ದು ಪ್ರಾಕೃತಿಕ ವಿಜ್ಞಾನಗಳಲ್ಲಿ ನನಗೆ ಗಣಿತಕ್ಕಿಂತ ಪ್ರಬಲತರ ಆಸಕ್ತಿ ಇತ್ತೆಂಬ ಒಂದೇ ಕಾರಣಕ್ಕಾಗಿ ಅಲ್ಲ. ಈ ಮುಂದಿನ ವಿಚಿತ್ರಾನುಭವವೂ ಅದರ ಕಾರಣವಾಗಿತ್ತು : ಗಣಿತ ಹಲವಾರು ವಿಶೇಷ ವಿಭಾಗಗಳಾಗಿ ಒಡೆದುಹೋಗಿದುದನ್ನು ಕಂಡೆ ; ಪ್ರತಿಯೊಂದು ವಿಭಾಗವೂ ನಮಗೆ ದತ್ತವಾಗಿರುವ ಅಲ್ಪಾಯುಷ್ಯವನ್ನು ಸುಲಭವಾಗಿ ಆಪೋಶಿಸಲು ಸಾಕು. ಹೀಗಾಗಿ, [ಸರ್ವಸಮಾನವಾದ ಎರಡು ಹುಲ್ಲುಕಂತೆಗಳನ್ನು ಎದುರು ಹಿಡಿದಾಗ] ಯಾವ ನಿರ್ದಿಷ್ಟ ಹುಲ್ಲುಕಂತೆಯನ್ನು ಆಯಬೇಕು ಎಂಬುದನ್ನು ನಿರ್ಧರಿಸಲಾಗದ ಬ್ಯೂರಿಡನ್ನನ ಕತ್ತೆಯಂತಾಯಿತು ನನ್ನ ಸ್ಥಿತಿ. ಗಣಿತಕ್ಷೇತ್ರದಲ್ಲಿ ಮೂಲಭೂತವಾಗಿ ಪ್ರಮುಖವಾದದ್ದು ಯಾವುದು, ನಿಜಕ್ಕೂ ಆಧಾರರೂಪದ್ದು ಯಾವುದು ಎಂಬುದನ್ನು ಉಳಿದ ಹೆಚ್ಚುಕಡಿಮೆ ನಿವಾರ್ಯ ಪ್ರೌಢಪಾಂಡಿತ್ಯದಿಂದ ಸ್ಪಷ್ಟವಾಗಿ ವಿಭೇದೀಕರಿಸುವಷ್ಟರ ಮಟ್ಟಿಗೆ ನನ್ನ ಅಂತರ್ಬೋಧೆ ಬಲಿಷ್ಠವಾಗಿಲ್ಲದಿದ್ದುದೇ ಇದರ ಕಾರಣವೆಂಬುದರಲ್ಲಿ ಸಂದೇಹವಿಲ್ಲ. ಇಷ್ಟು ಅಲ್ಲದೆ ನಿಸರ್ಗಜ್ಞಾನದ ಬಗ್ಗೆ ನನಗಿದ್ದ ಕುತೂಹಲ ನಿಸ್ಸಂದಿಗ್ಧವಾಗಿಯೂ ಪ್ರಬಲತರವಾಗಿತ್ತು ; ಆದರೆ ಭೌತವಿಜ್ಞಾನದ ಆಧಾರ ತತ್ತ್ವಗಳನ್ನು ಕುರಿತ ಹೆಚ್ಚು ಆಳವಾದ ತಿಳಿವಳಿಕೆಯನ್ನು ಗಳಿಸುವುದರತ್ತ ಸಾಗುವ ಹಾದಿ ಅತ್ಯಂತ ಜಟಿಲ ಹಾಗೂ ಸೂಕ್ಷ್ಮ ಗಣಿತ ವಿಧಾನಗಳಿಂದ ಬಂಧಿತವಾಗಿದೆ ಎಂಬ ಸಂಗತಿ ವಿದ್ಯಾರ್ಥಿ ಆಗಿದ್ದ ನನಗೆ ಸ್ಪಷ್ಟವಾಗಿರಲಿಲ್ಲ. ಮುಂದೆ ಸ್ವತಂತ್ರವಾಗಿ ವೈಜ್ಞಾನಿಕಾನ್ವೇಷಣೆಯನ್ನು ಮಾಡುತ್ತ ಸಾಗಿದಂತೆ ಕ್ರಮೇಣ ಈ ಜ್ಞಾನೋದಯವಾಯಿತು. ನಿಜ ಸಂಗತಿ ಎಂದರೆ ಭೌತವಿಜ್ಞಾನವೂ ಪ್ರತ್ಯೇಕ ವಲಯಗಳಾಗಿ ಒಡೆದುಹೋಗಿತ್ತು. ಇಂಥ ಒಂದೊಂದು ವಲಯವೂ, ಆಳವಾದ ತಿಳಿವಳಿಕೆಯನ್ನು ಗಳಿಸಬೇಕೆಂಬ ಹಸಿವನ್ನು ಎಂದೂ ಹಿಂಗಿಸದೆ, ಇಡೀ ಆಯುರ್ಮಾನದ ಕಾರ್ಯವನ್ನೇ ಕಬಳಿಸಬಲ್ಲದಾಗಿತ್ತು. ಇಲ್ಲಿಯೂ ಅರ್ಥಂಬರ್ಥವಾಗಿ ಸಂಬಂಧಿತವಾಗಿದ್ದ ದತ್ತಾಂಶಗಳ ರಾಶಿ ಅಗಾಧವಾಗಿತ್ತು. ಆದರೆ ಈ ರಂಗದಲ್ಲಿ ನಾನು ಬೇಗನೆ ಯಾವುದು ಮೂಲಭೂತಾಂಶಗಳತ್ತ ಒಯ್ಯಬಲ್ಲದು ಎಂಬುದನ್ನು ವಾಸನೆಯಿಂದಲೇ

ಗ್ರಹಿಸಲು ಕಲಿತೆ ಮತ್ತು ಮನಸ್ಸಿನ ಮೇಲೆ ಪೇರಿಕೊಂಡು ಬಂದು ಅದನ್ನು ಸಾರಭೂತ ವಿಷಯದಿಂದ ಕದಲಿಸುವ ಉಳಿದೆಲ್ಲವುಗಳಿಂದ ವಿಮುಖನಾಗಲು ಕಲಿತೆ. ಇಲ್ಲೊಂದು ಸಿಕ್ಕು ಇತ್ತು : ತನಗೆ ಒಲವು ಇರಲಿ, ಇಲ್ಲದಿರಲಿ—ವಿದ್ಯಾರ್ಥಿ ಪರೀಕ್ಷೆಗಳಿಗೋಸ್ಕರವಾಗಿ ಇವೆಲ್ಲ ರದ್ದಿಗಳನ್ನೂ ತನ್ನ ಮನದಾಳಕ್ಕೆ ಗಿಡಿಯಬೇಕಾಗಿತ್ತು. ಈ ಬಲವದ್ಬಂಧ ನನ್ನನ್ನು ಎಷ್ಟು ಧೃತಿಗೆಡಿಸಿಬಿಟ್ಟಿತೆಂದರೆ ಅಂತಿಮ ಪರೀಕ್ಷೆಯಲ್ಲಿ ಉತ್ತೀರ್ಣನಾದ ತರುವಾಯ ಮುಂದಿನ ಪೂರ್ತಿ ಒಂದು ವರ್ಷ ಕಾಲ ನನಗೆ ಯಾವುದೇ ವೈಜ್ಞಾನಿಕ ಸಮಸ್ಯೆಯ ಪರಿಶೀಲನೆಯೂ ಅರುಚಿಕರವಾಗಿತ್ತು.

## ಗಾಂಧೀಜಿ ಕುರಿತು

ತನ್ನ ಜನತೆಯ ನಾಯಕ, ಯಾವುದೇ ಬಾಹ್ಯ ಬಲದ ಬೆಂಬಲವಿರದಾತ : ಈ ರಾಜಕಾರಣಿಯ ಯಶಸ್ಸು ಚಮತ್ಕಾರವನ್ನಾಗಲಿ ತಾಂತ್ರಿಕ ವಿಷಯಗಳಲ್ಲಿ ಗಳಿಸಿದ ಪ್ರಾವೀಣ್ಯವನ್ನಾಗಲಿ ಅವಲಂಬಿಸಿಲ್ಲ, ಬದಲು, ಮನವೊಲಿಸಬಲ್ಲ ಸ್ವಂತ ವ್ಯಕ್ತಿತ್ವದ ಸಾಮರ್ಥ್ಯವನ್ನು ಮಾತ್ರ ಅವಲಂಬಿಸಿದೆ ; ಬಲಪ್ರಯೋಗವನ್ನು ಸದಾ ತಿರಸ್ಕರಿಸಿದ ಯಶಸ್ವೀ ಹೋರಾಟಗಾರ ; ವಿವೇಕ ವಿನೀತತೆಗಳಿಂದ ಕೂಡಿದ ಪುರುಷ ; ದೃಢ ನಿರ್ಧಾರ ಮತ್ತು ಅಚಲ ಸ್ಥೈರ್ಯದಿಂದ ಸಜ್ಜುಗೊಂಡು ಸಕಲಪ್ರಾಣವನ್ನೂ ತನ್ನ ಜನರ ಉದ್ಧಾರ ಹಾಗೂ ಸ್ಥಿತಿಗತಿಗಳ ಸುಧಾರಣೆಗಾಗಿ ಅರ್ಪಿಸಿದಾತ ; ಯೂರೋಪಿನ ಅಮಾನುಷ ಕ್ರೌರ್ಯವನ್ನು ಸರಳವ್ಯಕ್ತಿಯ ಗಾಂಭೀರ್ಯದಿಂದ ಎದುರಿಸಿ ಸರ್ವ ಸಂದರ್ಭಗಳಲ್ಲಿಯೂ ಶ್ರೇಷ್ಠತೆಯಿಂದ ಕಂಗೊಳಿಸಿದಾತ.

ಇಂಥವನೊಬ್ಬ ಎಂದಾದರೂ ಈ ನೆಲದ ಮೇಲೆ ರಕ್ತಮಾಂಸಭರಿತನಾಗಿ ಅಡ್ಡಾಡಿದುದು ನಿಜವಿರಬಹುದೇ ಎಂದು ಮುಂಬರಲಿರುವ ಪೀಳಿಗೆಗಳು ಸಂದೇಹಿಸುವುದು ಸಾಧ್ಯ.



ಆಲ್ಬರ್ಟ್ ಐನ್‌ಸ್ಟೈನ್
1879–1955

ಐನ್‌ಸ್ಟೈನರ ವ್ಯಕ್ತಿತ್ವದಲ್ಲಿ ಸ್ಥೂಲವಾಗಿ ಎರಡು ಮುಖ್ಯ ಅಂಶಗಳು ಬೆಸೆದುಕೊಂಡಿವೆ: ಯುಗಪ್ರವರ್ತಕ ವಿಜ್ಞಾನಿಯಾಗಿ ಆರ್ಕಿಮಿಡಿಸ್ ಮತ್ತು ನ್ಯೂಟನ್ ವ್ಯಕ್ತಿತ್ವಾಂಶ; ಮಾನವ ಹಿತಾಕಾಂಕ್ಷಿಯಾಗಿ ಬುದ್ಧ ಮತ್ತು ಸಾಕ್ರೆಟೀಸ್ ವ್ಯಕ್ತಿತ್ವಾಂಶ. ಪ್ರಸಕ್ತ ಪುಸ್ತಕ ಈ ಎರಡನೆಯ ಅಂಶದ ಕೆಲವೊಂದು ಹೊಳಹುಗಳನ್ನು ಬಿಂಬಿಸುತ್ತದೆ.

ಇಲ್ಲಿ ಉಲ್ಲೇಖಿಸಿರುವ ಹೆಚ್ಚಿನ ವಸ್ತು ಐನ್‌ಸ್ಟೈನ್ ಪತ್ರಾಗಾರದ ಕೊಡುಗೆಯಾಗಿದ್ದು ಬಲುಮಟ್ಟಿಗೆ ಇದೇ ಮೊದಲ ಬಾರಿಗೆ ಬೆಳಕು ಕಾಣುತ್ತಿರುವುದಾಗಿದೆ. ಇದರ ಆಯ್ಕೆ ಮತ್ತು ಸಂಪಾದನೆಗಳನ್ನು ಹೆಲನ್ ಡ್ಯೂಕಾಸ್ ಮತ್ತು ಬನೆಶ್ ಹಾಫ್‌ಮನ್ ಮಾಡಿರುತ್ತಾರೆ.

1928ರಲ್ಲಿ ಐನ್‌ಸ್ಟೈನರ ಕಾರ್ಯದರ್ಶಿ ಆದ ಹೆಲನ್ ಡ್ಯೂಕಾಸ್, 1955ರಲ್ಲಿ ಐನ್‌ಸ್ಟೈನ್ ಮೃತರಾದ ಬಳಿಕ, ಅವರ ಸಾಹಿತ್ಯಕ ಆಸ್ತಿಯ ನ್ಯಾಸಧಾರಿಯೂ ಲೇಖನಗಳ ಪತ್ರಾಗಾರ ಪಾಲಿಕೆಯೂ ಆಗಿದ್ದರು. ನ್ಯೂಯಾರ್ಕಿನ ಸಿಟಿ ಯೂನಿವರ್ಸಿಟಿಯ ಕ್ವೀನ್ಸ್ ಕಾಲೇಜಿನಲ್ಲಿ ಪ್ರೊಫೆಸರ್ ಆಫ್ ಮ್ಯಾಥ್‌ಮ್ಯಾಟಿಕ್ಸ್ ಎಮೆರಿಟಸ್ ಬನೆಶ್ ಹಾಫ್‌ಮನ್, ಐನ್‌ಸ್ಟೈನರ ಜೊತೆ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತದ ಸಂಶೋಧನೆಯಲ್ಲಿ ಸಹವರ್ತಿಯಾಗಿದ್ದರು.

ಮೂಲ ಇಂಗ್ಲಿಷ್ ಗ್ರಂಥದಿಂದ ಕನ್ನಡಕ್ಕೆ ಅನುವಾದ ಮಾಡಿರುವ ಜಿ. ಟಿ. ನಾರಾಯಣ ರಾಯರು ಮೈಸೂರು ವಿಶ್ವವಿದ್ಯಾನಿಲಯದ 'ಕನ್ನಡ ವಿಶ್ವಕೋಶ' ವಿಭಾಗದಲ್ಲಿ ವಿಜ್ಞಾನ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಕೆಲವು ಕೃತಿಗಳು: 'ಆಲ್ಬರ್ಟ್ ಐನ್‌ಸ್ಟೈನ್', 'ಭವಿಷ್ಯ ವಿಜ್ಞಾನ', 'ಶ್ರೀನಿವಾಸ ರಾಮಾನುಜನ್', 'ಐವರು ವಿಜ್ಞಾನಿಗಳು', 'ವೈಜ್ಞಾನಿಕ ಮನೋಧರ್ಮ' ಇತ್ಯಾದಿ.

ಮುಖಚಿತ್ರ: ಪ್ರಿನ್‌ಸ್ಟನ್ ಯೂನಿವರ್ಸಿಟಿ ಪ್ರೆಸ್ ಕೃಪೆಯಿಂದ.

---

ಡಿ. ವಿ. ಕೆ. ಮೂರ್ತಿ : : ಪ್ರಕಾಶಕರು : : ಮೈಸೂರು 570 004

ಬೆಲೆ: ರೂ. 15